KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮಾರ್ಚ್ ೧೦, ೨೦೧೧, (ಫಾಲ್ಗುಣ ೧೯, ಶಕ ವರ್ಷ ೧೯೩೨) | ಸಂಚಿಕೆ ೧೦ |
| --- | --- | --- |

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರ ವಿರುದ್ಧ ದಾಖಲಾದ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಉಲ್ಲೇಖ** : 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-15/ಸಿಆರ್-2/2008, ಹಾಸನ, ದಿನಾಂಕ 03-09-2010.

2) ತನಿಖಾಧಿಕಾರಿಯವರ ವರದಿ ದಿನಾಂಕ

3) ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.

***

**ಪ್ರಸ್ತಾವನೆ :**

ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರ ವಿರುದ್ಧ ಗುನ್ನೆ ಸಂಖ್ಯೆ: 02/2008 ರಲ್ಲಿ ಪೊಲೀಸ್ ನಿರೀಕ್ಷಕರು, ಹಾಸನ ವಿಭಾಗ, ಕರ್ನಾಟಕ ಲೋಕಾಯುಕ್ತರವರು ಹಾಸನ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ (ಉಲ್ಲೇಖ-2) ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು. ಇವರು ತಮ್ಮ ಪತ್ರ ದಿನಾಂಕ 03-09-10 (ಉಲ್ಲೇಖ-1 ರೊಡನೆ) ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ಕಲಂನಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ (ಉಲ್ಲೇಖ-1) ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ-15/ಸಿಆರ್-2/2008 ಹಾಸನ, ದಿನಾಂಕ 03-09-2010 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಪ್ರಥಮ ವರ್ತಮಾನ ವರದಿ ದಿನಾಂಕ 26-03-2008

2) ಶೋಧನಾ ಪಂಚನಾಮೆಗಳು :

1. ದಿನಾಂಕ 27-03-2008 ರಂದು ಆಪಾದಿತರು ವಿದ್ಯಾನಗರ ಬಡಾವಣೆ ಹಾಸನದಲ್ಲಿ ವಾಸವಾಗಿದ್ದ ಮನೆಯ ಶೋಧನಾ ಪಂಚನಾಮೆ.
2. ದಿನಾಂಕ 28-03-2008 ರಂದು ಆಪಾದಿತರ ಅತ್ತೆ ಶ್ರೀಮತಿ ಲಕ್ಷ್ಮೀದೇವಮ್ಮ ರವರ ವಾಸದ ಮನೆ ಗೋಪಾಲಸ್ವಾಮಿ ವಠಾರದ ಶೋಧನಾ ಪಂಚನಾಮೆ.
3. ದಿನಾಂಕ 28-03-2008 ರಂದು ಆಪಾದಿತರ ಮಗ ಚೇತನ್ ಕುಮಾರ್ ರವರ ಹೆಸರಿನಲ್ಲಿದ್ದ ಲಾಕರ್ ನಂ. 4 ಎಸ್.ಬಿ.ಎಂ. ಹಾಸನದಲ್ಲಿ ನಡೆಸಿರುವ ಶೋಧನಾ ಪಂಚನಾಮೆ.
4. ದಿನಾಂಕ 27-03-2008 ರಂದು ಆಪಾದಿತರು ಕೆಲಸ ಮಾಡುವ ಜಿಲ್ಲಾಧಿಕಾರಿಗಳ ಕಟ್ಟಡದಲ್ಲಿರುವ ಕಛೇರಿಯ ಶೋಧನಾ ಪಂಚನಾಮೆ.
5. ದಿನಾಂಕ 28-03-2008 ರಂದು ಆಪಾದಿತರ ಪತ್ನಿ ಶ್ರೀಮತಿ ಮಂಜುಳಾ ರವರು ಹಾಸನದ ಕೆನರಾ ಬ್ಯಾಂಕ್ ಶಾಖೆಯಲ್ಲಿ ಹೊಂದಿದ್ದ ಲಾಕರ್ ನಂ.-77 ತೆರೆದು ಪರಿಶೀಲಿಸಿದ ಶೋಧನಾ ಪಂಚನಾಮೆ.

3) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ:

4) ತನಿಖಾಧಿಕಾರಿಯ ಅಂತಿಮ ವರದಿಗೆ ಅನುಬಂಧಿಸಿರುವ ಈ ಕೆಳಕಂಡ ಕಡತಗಳು

1. ಕಡತ ಸಂಖ್ಯೆ 19–21–22 ಆಪಾದಿತರು ಹೊಂದಿದ್ದ ಆಸ್ತಿ ಮತ್ತು ದಾಯತ್ವಗಳ ಪಟ್ಟಿ ಆದಾಯ ತೆರಿಗೆಯ ದಾಖಲಾತಿಗಳು ಹಾಗೂ ತನಿಖೆಯ ವಿವರಗಳು ಇತ್ಯಾದಿ ಇರುವ ಕಡತ.
2. ಕಡತ ಸಂಖ್ಯೆ–23 ಆಪಾದಿತರು ಮತ್ತು ಅವರ ಕುಟುಂಬ ಸದಸ್ಯರು ಮತ್ತು ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿರುವ ಆಸ್ತಿಯ ದಾಖಲೆಗಳು ಇರುವ ಕಡತ.
3. ಕಡತ ಸಂಖ್ಯೆ–24–ಆಪಾದಿತರು ಮತ್ತು ಅವರ ಕುಟುಂಬ ಸದಸ್ಯರು ಮತ್ತು ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿರುವ ಆಸ್ತಿಯ ಖರ್ಚಿನ ವಿವರಗಳ ದಾಖಲೆಗಳು ಇರುವ ಕಡತ.
4. ಕಡತ ಸಂಖ್ಯೆ–25–ಆಪಾದಿತರರವರ ಆಸ್ತಿ/ವೇತನದ ಆದಾಯ ಮತ್ತು ಅವರ ಕುಟುಂಬ ಸದಸ್ಯರು ಮತ್ತು ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿರುವ ಆಸ್ತಿಯ ಆದಾಯದ ದಾಖಲೆಗಳು ಇರುವ ಕಡತ.

ತನಿಖಾಧಿಕಾರಿ ಶ್ರೀ ವಿ. ಶೇಖರ್, ಪೋಲೀಸ್ ಉಪ–ಅಧೀಕ್ಷಕರು ಸಿಟಿ ವಿಭಾಗ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಸಿಟಿ ವಿಭಾಗ ಬೆಂಗಳೂರು ಕರ್ನಾಟಕ ಲೋಕಾಯುಕ್ತ ಠಾಣೆ ಗುನ್ನೆ ನಂ. 02/2008ರಲ್ಲಿ ಲಂಚ ನಿರೋಧಕ ಕಾಯ್ದೆ. 1988 ರ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡಂತೆ ಪ್ರಕರಣವನ್ನು ದಾಖಲಿಸಿದ ನಂತರ ಈ ಕೆಳಕಾಣಿಸಿದ ತನಿಖಾಧಿಕಾರಿಗಳು

1. ದಿನಾಂಕ 27–03–2008 ಮತ್ತು 28–03–2008 ರಂದು ಆಪಾದಿತರು ವಾಸವಾಗಿರುವ ಹಾಸನದಲ್ಲಿನ ರವೀಂದ್ರನಗರ ಮತ್ತು ವಿದ್ಯಾನಗರ ಬಡಾವಣೆಯ ಮನೆ, ಹಾಸನದ ಉತ್ತರ ಬಡಾವಣೆಯಲ್ಲಿನ ಮನೆಯ ತನಿಖೆ ನಡೆಸಿರುತ್ತಾರೆ.
2. ದಿನಾಂಕ 28–03–2008 ರಂದು ಆಪಾದಿತರ ಅತ್ತೆ ಶ್ರೀಮತಿ ಲಕ್ಷ್ಮೀದೇವಮ್ಮ ರವರ ವಾಸದ ಮನೆಯ ತನಿಖೆ ನಡೆಸಿರುತ್ತಾರೆ.
3. ದಿನಾಂಕ 27–03–2008 ರಂದು ಆಪಾದಿತರು ಕರ್ತವ್ಯ ನಿರ್ವಹಿಸುತ್ತಿದ್ದ ಹಾಸನ ಜಿಲ್ಲಾಧಿಕಾರಿಗಳ ಕಚೇರಿಯ ತನಿಖೆ ನಡೆಸಿರುತ್ತಾರೆ.
4. ಆಪಾದಿತರ ಮಗ ಶ್ರೀ ಚೇತನ್ ಕುಮಾರ್ ರವರ ಹೆಸರಿನಲ್ಲಿದ್ದ ಲಾಕರ್ ಅನ್ನು ತನಿಖೆ ಮಾಡಿರುತ್ತಾರೆ
5. ದಿನಾಂಕ 28–04–2008 ರಂದು ಆಪಾದಿತರ ಪತ್ನಿ ರವರು ಕೆನರಾ ಬ್ಯಾಂಕ್ ಹಾಸನದಲ್ಲಿ ಹೊಂದಿದ್ದ ಲಾಕರ್ ಅನ್ನು ತನಿಖೆ ನಡೆಸಿರುತ್ತಾರೆ.

ಮೇಲ್ಕಂಡ ಸ್ಥಳಗಳನ್ನು ದಿನಾಂಕ 27–03–08 ಮತ್ತು ದಿನಾಂಕ 28–03–08 ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧನೆ ನಡೆಸಿರುತ್ತಾರೆ. ಆ ಸಂದರ್ಭದಲ್ಲಿ ತಯಾರಿಸಲಾದ ಶೋಧನಾ ಪಂಚನಾಮೆಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ, ಬೆಳ್ಳಿ, ಬ್ಯಾಂಕ್ ಡಿಪಾಸಿಟ್‌ಗಳು, ವಾಹನಗಳು ಮತ್ತು ಜಮೀನು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಪತ್ತೆಯಾಗಿರುತ್ತವೆ.

ಸದರಿ ಪ್ರಕರಣದಲ್ಲಿ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಅಧಿಕಾರಿ ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ, ಇವರು 1992 ರಿಂದ ದಿನಾಂಕ 27–03–2008 ರವರೆಗಿನ ಪರಿಶೀಲನಾ ಅವಧಿಯಲ್ಲಿ (ಅಜಛಿಇ ಕಜಡಿಉಜ) ಒಟ್ಟು ರೂ. 1,30,13,264–00 ಗಳ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತನ್ನ ಮತ್ತು ತನ್ನ ಕುಟುಂಬದ ಸದಸ್ಯರುಗಳಿಗಾಗಿ ಮಾಡಿರುವ ಒಟ್ಟು ಖರ್ಚು ರೂ. 30,35,950–00 ಗಳಾಗಿದ್ದು. ಆಪಾದಿತರು ಈ ಅವಧಿಯಲ್ಲಿ ಎಲ್ಲಾ "ಬಲ್ಲ ಮೂಲ" ಗಳಿಂದ ಗಳಿಸಿರುವ ಆದಾಯವು ರೂ. 33,52,175–00 ಗಳಾಗಿರುತ್ತದೆಂದು ಕಂಡು ಬಂದಿರುತ್ತದೆ. ಆಪಾದಿತರ ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ ರೂ. 1,60,49,214–00 ಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ. 1,26,97,039–00 ಗಳಾಗಿರುತ್ತವೆ. ಅಂದರೆ ಆಪಾದಿತ ಸರ್ಕಾರಿ ಅಧಿಕಾರಿ ಶೇಕಡ 378.77 ರಷ್ಟು ತಮ್ಮ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮರ್ಥನೀಯ ವಿವರಣೆ ಅಥವಾ ಸಮರ್ಥನೀಯ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ಅಧಿಕಾರಿ ತಮ್ಮ "ಬಲ್ಲಮೂಲ" ಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ ಅಪರಾಧಿಕ ದುರ್ನಡತೆ ಎಸಗಿರುವುದರಿಂದ, ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅವಶ್ಯಕವೆಂದು ಅಭಿಪ್ರಾಯ ಪಡಲಾಗಿದೆ.

ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಹಾಗೂ ಸಂಪೂರ್ಣವಾಗಿ ಸರ್ಕಾರಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರ ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988 ರ ಕಲಂ 19(1)(ಬಿ) ಅಡಿಯಲ್ಲಿ ಆಪಾದಿತ ಅಧಿಕಾರಿ ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 36 ಕೆಇವಿ 2008, ಬೆಂಗಳೂರು, ದಿನಾಂಕ: 20–12–2010**

ಆರೋಪಿಯಾದ ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಹಾಲಿ ಅಪರ ಜಿಲ್ಲಾಧಿಕಾರಿ ಹಾಗೂ ಅಪರ ಜಿಲ್ಲಾ ದಂಡಾಧಿಕಾರಿ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರನ್ನು ಹುದ್ದೆಯಿಂದ ತೆಗೆದುಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಹಾಲಿ ಅಪರ ಜಿಲ್ಲಾಧಿಕಾರಿ ಹಾಗೂ ಅಪರ ಜಿಲ್ಲಾ ದಂಡಾಧಿಕಾರಿ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2) ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ 20–12–10 ರಂದು ಹೊರಡಿಸಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ॥ ಎಂ. ಟಿ. ರೇಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಆಸುಇ (ಸೇವೆಗಳು)

ಪಿ.ಆರ್. ನಂ. 114

## LAW, JUSTICE AND HUMAN RIGHTS SECRETARIAT

### CORRIGENDUM

No. LAW 218 LCE 2010, Bangalore, Dated 15th December 2010.

The words “Additional City Civil and Sessions Judge” mentioned in the subject, preamble and order portion of G.O. No. LAW 218 LCE 2010, dated 28-10-2010 shall be corrected and read as ‘Additional District and Sessions Judge” Further the words and figures “2014 Administration of Justice-00-105-Civil and Sessions Courts-0-00-105 Civil and Sessions Courts-0-03 Special Courts for trial of C.B.I. cases” mentioned in Para 2 of the order portion of the said Government Order shall be corrected and read as “2014-Administration of Justice-00-105-Civil and Sessions Courts-0-03 Special Courts for trial of C.B.I. cases.”

By Order and in the name of the Governor of Karnataka
**Syed Abdul Nazeer**
Under Secretary to Government (Admn-1)
Law, Justice & Human Rights Department

PR. No. 115

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಡಳಿತ ಕನ್ನಡ ಶಾಖೆಯ ಮೋದಿ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆ ನೀಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ 19–8–2010
2) ದಿನಾಂಕ 13–12–2010ರ ಪತ್ರ ಸಂಖ್ಯೆ: ಕಸಂವಾಪ್ರ 243 ಸ್ವೀಮರ 2010
3) ದಿನಾಂಕ 9–12–2010ರ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ರವರ ಪತ್ರ ಸಂಖ್ಯೆ: 1085/ಸಿಜಿಎಸ್/ವೈಎಡಿ/ಕೆ&ಸಿ–10–11.

***

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಡಳಿತ ಕನ್ನಡ ಶಾಖೆಯಲ್ಲಿರುವ ಮೋದಿ ಜೆರಾಕ್ಸ್ ಯಂತ್ರದ ವಾರ್ಷಿಕ ಕಾರ್ಯನಿರ್ವಹಣಾ ಗುತ್ತಿಗೆಯನ್ನು ನೀಡುವ ಸಲುವಾಗಿ ದರ ಪಟ್ಟಿಯನ್ನು ಮೂರು ಕಂಪನಿಗಳಿಂದ ಕೋರಲಾಗಿತ್ತು. ಅದರಂತೆ ಮೂರು ಕಂಪನಿಗಳು ದರಪಟ್ಟಿಯನ್ನು ನೀಡಿದ್ದು, ಅವುಗಳು ನೀಡಿರುವ ದರಪಟ್ಟಿಯು ಈ ಕೆಳಗಿನಂತಿರುತ್ತವೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಒಟ್ಟು ರೂ.ಗಳಲ್ಲಿ |
|---|---|---|---|
| 1 | ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ | ಮೋದಿ ಜೆರಾಕ್ಸ್ ಯಂತ್ರದ ಎ.ಎಂ.ಸಿ. | 9500+10,3% ಸೇವಾ ತೆರಿಗೆ=10,478–00 |
| 2 | ತೀರ್ಥಂಕರ ಎಂಟರ್ ಪ್ರೈಸಸ್ | ಮೇಲಿನಂತೆ | 10,500+10,3% ಸೇವಾ ತೆರಿಗೆ=11,581–00 |
| 3 | ಭಾರತಿ ಎಂಟರ್ ಪ್ರೈಸಸ್ | ಮೇಲಿನಂತೆ | 10,500+10,3% ಸೇವಾ ತೆರಿಗೆ=11,581–00 |

ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ, ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್, ನಂ. 36/3, ಆಂಜನೇಯ ಸ್ವಾಮಿ ದೇವಸ್ಥಾನ ರಸ್ತೆ, ಮಾರಪ್ಪ ಗಾರ್ಡನ್, ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು ರವರು ಕಡಿಮೆ ದರ ನಮೂದಿಸಿದ್ದು, ಅದರಂತೆ ಸದರಿ ಕಂಪನಿಗೆ ರೂ. 9500/– (ಒಂಬತ್ತು ಸಾವಿರದ ಐದುನೂರು ಮಾತ್ರ) ಸೇವಾ ತೆರಿಗೆ ಸೇರಿ ರೂ. 10478–00 ಗಳ (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ವಾರ್ಷಿಕ ಗುತ್ತಿಗೆ ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 243 ಸ್ವೀಮರ 2010, ಬೆಂಗಳೂರು, ದಿನಾಂಕ: 20–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಡಳಿತ ಕನ್ನಡ ಶಾಖೆಯಲ್ಲಿನ ಮೋದಿ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಯನ್ನು ಕಡಿಮೆ ದರ ರೂ. 9,500/– (ಒಂಬತ್ತು ಸಾವಿರದ ಐದುನೂರು ಮಾತ್ರ)

ಸೇವಾ ತೆರಿಗೆ ಸೇರಿ ರೂ. 10478-00 ಗಳ (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ನಮೂದಿಸಿರುವ, ಬೆಂಗಳೂರಿನ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್, ನಂ. 36/3, ಆಂಜನೇಯ ಸ್ವಾಮಿ ದೇವಸ್ಥಾನ ರಸ್ತೆ, ಮಾರಪ್ಪ ಗಾರ್ಡನ್, ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು ಇವರಿಗೆ ವಾರ್ಷಿಕ ಗುತ್ತಿಗೆ ನೀಡಲು ಆದೇಶಿಸಿದೆ.

ಈ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ 19-8-2010ರಲ್ಲಿ ನೀಡಿರುವ ಆದೇಶದನ್ವಯ ಲೆಕ್ಕ ಶೀರ್ಷಿಕೆ 2052-00-090-0-01-051 ಸಾಮಾನ್ಯ ವೆಚ್ಚಗಳು ಅಡಿಯಲ್ಲಿ ಭರಿಸುವುದು. ಹಾಗೂ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಗೆ ರೂ. 10,478-00 (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಗಳ ಮೊತ್ತವನ್ನು ಸಿಆಸುಇ ಲೆಕ್ಕ ಪತ್ರ ಶಾಖೆಯು ಡಿ.ಸಿ. ಬಿಲ್ ಮೂಲಕ ಬಿಡುಗಡೆ ಮಾಡುವುದು.

ಕಾಂಪು ಗ್ರಾಫಿಕ್ಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಡಳಿತ ಕನ್ನಡ ಶಾಖೆಯಲ್ಲಿರುವ ಮೋದಿ ಜೆರಾಕ್ಸ್ ಯಂತ್ರದ ವಾರ್ಷಿಕ ಗುತ್ತಿಗೆಯನ್ನು ನೀಡಿರುವುದರಿಂದ ಜೆರಾಕ್ಸ್ ಯಂತ್ರವನ್ನು ಸರಿಪಡಿಸಿ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. ನಂ. 116

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆ ನೀಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ 19-8-2010
2) ದಿನಾಂಕ 30-11-2010ರ ಪತ್ರ ಸಂಖ್ಯೆ: ಕಸಂವಾಪ್ರ 115 ಸ್ವೀಮರ 2010
3) ದಿನಾಂಕ 9-12-2010ರ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ರವರ ಪತ್ರ ಸಂಖ್ಯೆ: 1085/ಸಿಜಿಎಸ್/ವೈಎಡಿ/ಕೆ&ಸಿ-10-11.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿರುವ ರೀಕೋ ಕಂಪನಿಯ ಜೆರಾಕ್ಸ್ ಯಂತ್ರದ ವಾರ್ಷಿಕ ಕಾರ್ಯನಿರ್ವಹಣಾ ಗುತ್ತಿಗೆಯನ್ನು ನೀಡುವ ಸಲುವಾಗಿ ದರ ಪಟ್ಟಿಯನ್ನು ಮೂರು ಕಂಪನಿಗಳಿಂದ ಕೋರಲಾಗಿತ್ತು. ಅದರಂತೆ ಮೂರು ಕಂಪನಿಗಳು ದರಪಟ್ಟಿಯನ್ನು ನೀಡಿದ್ದು, ಅವುಗಳು ನೀಡಿರುವ ದರಪಟ್ಟಿಯು ಈ ಕೆಳಗಿನಂತಿರುತ್ತವೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಒಟ್ಟು ರೂ.ಗಳಲ್ಲಿ |
|---|---|---|---|
| 1 | ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ | ರೀಕೋ ಜೆರಾಕ್ಸ್ ಯಂತ್ರದ ಎ.ಎಂ.ಸಿ. | 9500+10,3% ಸೇವಾ ತೆರಿಗೆ=10,478-00 |
| 2 | ತೀರ್ಥಂಕರ ಎಂಟರ್ ಪ್ರೈಸಸ್ | ಮೇಲಿನಂತೆ | 10,750+10,3% ಸೇವಾ ತೆರಿಗೆ=11,857-00 |
| 3 | ಭಾರತಿ ಎಂಟರ್ ಪ್ರೈಸಸ್ | ಮೇಲಿನಂತೆ | 10,500+10,3% ಸೇವಾ ತೆರಿಗೆ=11,581-00 |

ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ, ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್, ನಂ. 36/3, ಆಂಜನೇಯ ಸ್ವಾಮಿ ದೇವಸ್ಥಾನ ರಸ್ತೆ, ಮಾರಪ್ಪ ಗಾರ್ಡನ್, ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು ರವರು ಕಡಿಮೆ ದರ ನಮೂದಿಸಿದ್ದು, ಅದರಂತೆ ಸದರಿ ಕಂಪನಿಗೆ ರೂ. 9500/- (ಒಂಬತ್ತು ಸಾವಿರದ ಐದುನೂರು ಮಾತ್ರ) ಸೇವಾ ತೆರಿಗೆ ಸೇರಿ ರೂ. 10478-00 ಗಳ (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ವಾರ್ಷಿಕ ಗುತ್ತಿಗೆ ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 236 ಸ್ವೀಮರ 2010, ಬೆಂಗಳೂರು, ದಿನಾಂಕ: 23-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಸ್ವೀಮರ ಶಾಖೆಯಲ್ಲಿನ ರೀಕೋ ಕಂಪನಿಯ ಜೆರಾಕ್ಸ್ ಯಂತ್ರದ ವಾರ್ಷಿಕ ನಿರ್ವಹಣಾ ಗುತ್ತಿಗೆಯನ್ನು ಕಡಿಮೆ ದರ ರೂ. 9,500/-(ಒಂಬತ್ತು ಸಾವಿರದ ಐದುನೂರು ಮಾತ್ರ) ಸೇವಾ ತೆರಿಗೆ ಸೇರಿ ರೂ. 10478-00 ಗಳ (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ನಮೂದಿಸಿರುವ, ಬೆಂಗಳೂರಿನ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್, ನಂ. 36/3, ಆಂಜನೇಯ ಸ್ವಾಮಿ ದೇವಸ್ಥಾನ ರಸ್ತೆ, ಮಾರಪ್ಪ ಗಾರ್ಡನ್, ಬೆನ್‌ಸನ್ ಟೌನ್ ಪೋಸ್ಟ್, ಬೆಂಗಳೂರು ಇವರಿಗೆ ವಾರ್ಷಿಕ ಗುತ್ತಿಗೆ ನೀಡಲು ಆದೇಶಿಸಿದೆ.

ಈ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಡಿಎಸ್‌ವೈ 2010, ದಿನಾಂಕ 19-8-2010ರಲ್ಲಿ ನೀಡಿರುವ ಆದೇಶದನ್ವಯ ಲೆಕ್ಕ ಶೀರ್ಷಿಕೆ 2052-00-090-0-01-051 ಸಾಮಾನ್ಯ ವೆಚ್ಚಗಳು ಅಡಿಯಲ್ಲಿ ಭರಿಸುವುದು ಹಾಗೂ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಕಂಪನಿಗೆ ರೂ. 10,478-00 (ಹತ್ತು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಗಳ ಮೊತ್ತವನ್ನು ಸಿಆಸುಇ ಲೆಕ್ಕಪತ್ರ ಶಾಖೆಯು ಡಿ.ಸಿ. ಬಿಲ್ ಮೂಲಕ ಬಿಡುಗಡೆ ಮಾಡುವುದು.

ಕಾಂಪು ಗ್ರಾಫಿಕ್ಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ (ಸ್ವೀಮರ) ಶಾಖೆಯಲ್ಲಿರುವ ಜೆರಾಕ್ಸ್ ಯಂತ್ರದ ವಾರ್ಷಿಕ ಗುತ್ತಿಗೆಯನ್ನು ನೀಡಿರುವುದರಿಂದ ಜೆರಾಕ್ಸ್ ಯಂತ್ರವನ್ನು ಸರಿಪಡಿಸಿ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಕಾಂಪು ಗ್ರಾಫಿಕ್ಸ್ ಸಿಸ್ಟಮ್ಸ್ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. ನಂ. 117

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ 2009–10ನೇ ಸಾಲಿನ ಅನುದಾನವನ್ನು ಲೆಕ್ಕಶೀರ್ಷಿಕೆ 2551–01–198–6–02 ರ ಅಡಿ ಪುನರ್ ವಿನಿಯೋಗದ ಮೂಲಕ ಭರಿಸುವ ಬಗ್ಗೆ.

**ಓದಲಾಗಿದೆ** :

1. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ರವರ ಆದೇಶ ಸಂ. ಪಿಸಿ(ಪಿ)19/320/ಎಸ್‌ಸಿಎ/2009–ಡಬ್ಲ್ಯೂಜಿಎಸ್ ದಿನಾಂಕ : 11–11–2009 & 10–03–2010.
2. ಆರ್ಥಿಕ ಇಲಾಖೆಯ ಜಮಾ ಧೃಢೀಕರಣ ಪತ್ರ ಸಂ.ಆಇ : 13 : ಬಿಜಿಎಲ್ : 2009 ದಿನಾಂಕ : 20–11–2009 ಮತ್ತು 19–03–2010.
3. ಸರ್ಕಾರದ ಆದೇಶ ಸಂ. ಗ್ರಾಅಪ.1.ಪಘಯೋ. 2009(ಭಾ–1) ಬೆಂಗಳೂರು, ದಿನಾಂಕ : 02–12–2009 ಮತ್ತು ದಿನಾಂಕ : 23–03–2010.
4. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ರವರ ಆದೇಶ ಸಂ.ಪಿಸಿ(ಪಿ) 19/125/ಕೆಎಆರ್/2010–ಡಬ್ಲ್ಯೂಜಿಎಸ್ ದಿನಾಂಕ : 10–12–2010.

**ಪ್ರಸ್ತಾವನೆ :**

ಕೇಂದ್ರ ಯೋಜನಾ ಆಯೋಗವು ಮೇಲೆ ಓದಲಾದ ಆದೇಶ (1)ರಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10ನೇ ಸಾಲಿಗೆ ಕ್ರಮವಾಗಿ ರೂ. 1966.06 ಮತ್ತು ರೂ. 693.62 ಗಳನ್ನು ಮೊದಲನೇ ಮತ್ತು ಎರಡನೇ ಕಂತಿನ ಅನುದಾನವು ಸೇರಿದಂತೆ ರೂ. 2659.68 ಗಳನ್ನು ಬಿಡುಗಡೆ ಗೊಳಿಸಲಾಗಿದ್ದು ಸದರಿಯಂತೆ ಆದೇಶ (3)ರಲ್ಲಿ ಸಂಬಂಧಿಸಿದ ಜಿಲ್ಲೆಗಳಿಗೆ ಮುಖ್ಯವಾಗಿ ಕಾಲುಸಂಕವನ್ನೊಳಗೊಂಡ ಕಿಂಡಿ ಅಣೆಕಟ್ಟು (Vented dam cum foot bridges) ನಿರ್ಮಾಣಕ್ಕಾಗಿ ಹೆಚ್ಚಿನ ಆದ್ಯತೆ ಮೇರೆಗೆ ಬಿಡುಗಡೆ ಮಾಡಲಾಗಿರುತ್ತದೆ. 2009–10ನೇ ಸಾಲಿನಲ್ಲಿ ಬಿಡುಗಡೆಗೊಂಡ ಅನುದಾನದ ಪೈಕಿ 2010–11ನೇ ಸಾಲಿನಲ್ಲಿಯೂ ಕೆಲವು ಜಿಲ್ಲೆಗಳಿಂದ ಅನುದಾನದ ಮೊತ್ತ ಉಳಿತಾಯವಾಗುವ ಸಾಧ್ಯತೆ ಇರುತ್ತದೆ.

ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ರವರ ಆದೇಶ (4)ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನಲ್ಲಿ ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆಯಡಿ ಕಾಲುಸಂಕವನ್ನೊಳಗೊಂಡ ಕಿಂಡಿ ಅಣೆಕಟ್ಟು (Vented dam cum foot bridges) ರೂ. 89.41 ಲಕ್ಷಗಳ ಹೆಚ್ಚುವರಿ ಕ್ರಿಯಾಯೋಜನೆಗೆ ಮಂಜೂರಾತಿ ನೀಡಿ 2009–10ನೇ ಸಾಲಿನಲ್ಲಿ ವಿವಿಧ ಜಿಲ್ಲೆಗಳಲ್ಲಿ ವೆಚ್ಚವಾಗದೇ ಉಳಿಯುವ ಮೊತ್ತದಲ್ಲಿ ಪುನರ್ ವಿನಿಯೋಗ ಮಾಡಿಕೊಳ್ಳುವಂತೆ ಸೂಚಿಸಲಾಗಿರುತ್ತದೆ. ಈ ಅನುದಾನವನ್ನು 2009–10ನೇ ಸಾಲಿನಲ್ಲಿ ಈವರೆಗೆ ಅನುದಾನ ಉಳಿಸಿಕೊಂಡಿರುವ ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲಾ ಪಂಚಾಯತಿಗಳಲ್ಲಿ ಉಳಿಯಬಹುದಾದ ಮೊತ್ತದಿಂದ ಪುನರ್ ವಿನಿಯೋಗದ ಮೂಲಕ ನೀಡಬೇಕಾಗಿದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ.1.ಪಘಯೋ. 2010, ಬೆಂಗಳೂರು, ದಿನಾಂಕ: 27–12–2010**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2009–10ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2551–01–198–6–02ರ ಅಡಿ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನಲ್ಲಿ 2010–11ನೇ ಸಾಲಿನ ಹೆಚ್ಚುವರಿ ಕ್ರಿಯಾ ಯೋಜನೆಯಲ್ಲಿ ಪ್ರಸ್ತಾಪಿಸಿರುವ ಕಾಲುಸಂಕವನ್ನೊಳಗೊಂಡ ಕಿಂಡಿ ಅಣೆಕಟ್ಟು (Vented dam cum foot bridges) ನಿರ್ಮಾಣಕ್ಕಾಗಿ ಅಗತ್ಯವಿರುವ ಒಟ್ಟು ರೂ.89.41 ಲಕ್ಷಗಳನ್ನು ಎಂಭತ್ತೊಂಬತ್ತು ಲಕ್ಷ ನಲವತ್ತೊಂದು ಸಾವಿರ ಮಾತ್ರ) ಕ್ರಮವಾಗಿ ಜಿಲ್ಲಾ ಪಂಚಾಯತ್ ಚಿಕ್ಕಮಗಳೂರು ವತಿಯಿಂದ ರೂ. 20.00 ಲಕ್ಷ (ರೂ. ಇಪ್ಪತ್ತು ಲಕ್ಷ ಮಾತ್ರ) ಮತ್ತು ಕೊಡಗು ಜಿಲ್ಲಾ ಪಂಚಾಯತ್ ವತಿಯಿಂದ ರೂ. 69.41 ಲಕ್ಷ (ರೂ. ಅರವತ್ತೊಂಬತ್ತು ಲಕ್ಷ ನಲವತ್ತೊಂದು ಸಾವಿರ ಮಾತ್ರ) ಗಳನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಮಂಜೂರಾತಿ ಅನುದಾನದ ಲೆಕ್ಕಶೀರ್ಷಿಕೆ 2551–01–198–6–02 ರಡಿ ಉಳಿದಿರುವ ಮೊತ್ತದಲ್ಲಿ ಅನುಬಂಧದಲ್ಲಿ (ಪ್ರಪತ್ರ–22ಎ ರಲ್ಲಿ) ತೋರಿಸಿರುವಂತೆ ಪುನರ್ ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಕಂಡಿಕೆ 58ರಲ್ಲಿನ ಟಿಪ್ಪಣಿ ದಿನಾಂಕ : 24–12–2010ರಲ್ಲಿ ಸಹಮತಿಸಿದಂತೆ ಹಾಗೂ ಸರ್ಕಾರದ ಆದೇಶ ಸಂ.ಎಫ್‌ಡಿ.9.ಟಿಎಫ್‌ಪಿ.2004 ದಿನಾಂಕ 07–04–2005ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ದಿನಾಂಕ : 24–12–2010ರ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಎ.ಮೇಘಣ್ಣವರ**

ನಿರ್ದೇಶಕರು,

ಗ್ರಾಮೀಣ ಮೂಲಭೂತ ಸೌಲಭ್ಯಗಳು

ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ

ಪ್ರಪತ್ರ 22ಎ–ಕೆಎಫ್‌ಸಿ (ಅನುಚ್ಛೇದ 308)

ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಣ ಹಂಚಿಕೆ (ಅಲಾಟ್‌ಮೆಂಟ್)ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬೇಕಾದ ಪುನರ್ವಿನಿಯೋಗದ ವಿವರಣೆ

(ರೂ. ಲಕ್ಷಗಳಲ್ಲಿ)

| ಮುಂಗಡ ಪತ್ರದ ಪ್ರಧಾನ, ಚಿಕ್ಕ, ಉಪ ಮತ್ತು ವಿವರವಾದ ಶೀರ್ಷಿಕೆಗಳು | ಹೆಚ್ಚಿಸಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ (2009–10ನೇ ಸಾಲಿನಲ್ಲಿ ವೆಚ್ಚವಾಗದೇ ಉಳಿದಿರುವ ಮೊತ್ತ) | | | | ಕಡಿಮೆ ಮಾಡಲು ಪ್ರಸ್ತಾವಿಸಲಾದ ಅಂದಾಜಿನ ಶೀರ್ಷಿಕೆ (2009–10ನೇ ಸಾಲಿನಲ್ಲಿ ವೆಚ್ಚವಾಗದೇ ಉಳಿದಿರುವ ಮೊತ್ತ) | | | | ಷರಾ ಹಣ ಹಂಚಿಕೆ (ಅಲಾಟ್‌ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಎಲ್ಲ ಪೂರ್ಣವಾಗಿ ವಿವರಿಸಬೇಕು |
|---|---|---|---|---|---|---|---|---|---|
| | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವ ನೀಯ ವೆಚ್ಚ | ಬೇಕಾದ ಹೆಚ್ಚಿನ ಅಲಾಟ್ ಮೆಂಟ್ ವಿವರ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ (ಎಂದರೆ) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಪುನರ್ವಿನಿ ಯೋಗಕ್ಕೆ ಲಭ್ಯವಿರುವ ಮೊತ್ತ | |
| 1 | 2 | 3 | 4 | 5 | 6 | 7 | 8 | 9 | 10 |
| 2551–01–198–6–02 | | | | | | | | | 2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನದಲ್ಲಿ ಉಳಿಕೆ ಮೊತ್ತವನ್ನು 2010–11ನೇ ಸಾಲಿಗೆ ಮಂಜೂರಾಗಿರುವ ಅನುದಾನದ ಜೊತೆಗೆ ಉತ್ತರ ಕನ್ನಡ ಜಿಲ್ಲೆಗೆ ಹೆಚ್ಚುವರಿ ಕ್ರಿಯಾಯೋಜನೆ ಅನುಷ್ಠಾನಕ್ಕಾಗಿ ಅನುದಾನವನ್ನು ಪುನರ್ ವಿನಿಯೋಗ ಮಾಡಲಾಗಿದೆ. |
| 1. ಉತ್ತರ ಕನ್ನಡ – 416 | 176.64 | 76.27 | 189.780 | 89.410 | – | – | – | – | |
| | | | | | | | | | |
| **ಒಟ್ಟು** | **176.64** | **76.27** | **189.780** | **89.410** | – | – | – | – | |
| | | | | | | | | | |
| 1. ಚಿಕ್ಕಮಗಳೂರು – 408 | – | – | – | – | 226.89 | 163.56 | 43.33 | 20.000 | ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಿರುವ ಅನುದಾನದಲ್ಲಿ ಉಳಿಕೆ ಮೊತ್ತದಲ್ಲಿ ಲಭ್ಯವಿರುವ ಭಾಗಶಃ ಮೊತ್ತವನ್ನು ಸದರಿ ಜಿಲ್ಲೆಗಳಲ್ಲಿ ಲಭ್ಯವಿರುವ ಹಣದಿಂದ ಪುರ್ನವಿನಿಯೋಗ ಮಾಡಬಹುದು. |
| 2. ಕೊಡಗು – 411 | – | – | – | – | 215.39 | 58.67 | 87.31 | 69.410 | |
| **ಒಟ್ಟು** | | | | | **442.28** | **222.23** | **130.64** | **89.41** | |

ಪಿ.ಆರ್. 118

**ಪಿ. ರವಿಕುಮಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## INFORMATION TECHNOLOGY, BIOTECHNOLOGY, SCIENCE AND TECHNOLOGY SECRETARIAT

**Sub :-** Proposal of IIITB Bangalore for financial support for expansion of current campus in Bangalore.

**Read :-** 1. Govt. Order No. ITD 30 MDA 2009, dated : 18-01-2010.
2. Govt. Order No. ITD 30 MDA 2009, dated : 22-06-2010.
2. Letter dated 29-11-2010 of the Directorate of Information Technology & Bio Technology Department and the letter dated : 03-11-2010 of the Registrar, IIITB, Bangalore.

**Preamble:**

The International Institute of Information Technology, Bangalore during 2009-10, has submitted a proposal for expansion of their current campus at Electronics City, Bangalore at an estimated cost of Rs. 11.43 crores vide their letter dated 01-10-2009. Whereas, Finance Department vide their Note No. FD 304 Exp-2/09, dated 21-12-2009 agreed to provide Rs. 6.00 crores over two

years, for the said project and to provide Rs. 300 lakhs for 2009-10 in Supplementary Estimate-II under the Head of Account **"3451-00-090-2-05-101 (Plan)"**

Accordingly, in the Government Order read at (1) above, Government had accorded approval for release of Rs. 300 lakhs to the Director, International Institute of Information Technology, Bangalore (IIITB) for expansion of their current campus at Electronics City in Bangalore.

In the Government Order read at (2) above, Government have accorded approval for release of Rs. 100 lakhs to the Director, International Institute of Information Technology, Bangalore (IIITB) for expansion of their current campus at Electronics City in Bangalore provided in the 2010-11 Budget.

The Registrar, IIITB, Bangalore vide his letter dated : 03-11-2010 read at (3) above, has requested to release the balance amount Rs. 200 lakhs, that has been provided in the 2010-11 Budget.

The request of the Registrar, IIITB, Bangalore has been examined and it is considered to release Rs. 100 lakhs to the Director IIITB, for expansion of their current campus at Electronics City, Bangalore out of Rs. 300 lakhs provided under the Head of Account **"3451-00-090-2-05-101 (Plan)"** as per the delegated powers to Principal Secretary. Hence the order.

**Government Order No. ITD 30 MDA 2009, Bangalore, dated : 30-12-2010**

In the circumstances explained in the preamble, Government are pleased to accord approval for release of Rs. 100 lakhs (Rupees One Hundred Lakhs only) to the Director, International Institute of Information Technology, Bangalore (IIITB) for expansion of their current campus at Electronics City in Bangalore out of Rs. 300 lakhs provided in the 2010-11 Budget.

The expenditure on this account shall be met, out of the grants provided under the Head of Account **"3451-00-090-2-05-101 (Plan)"** for the year 2010-11.

The Administrative Officer, Directorate of Information Technology & Bio Technology Department shall draw the said grant from the Treasury duly countersigned by the Director, Information Technology & Biotechnology and disburse the amount.

The Director, International Institute of Information Technology, Bangalore (IIITB) shall submit the Utilization Certificate in the prescribed format through the Director, Information Technology and Biotechnology, Bangalore.

This Order issues with the concurrence of Finance Department vide their note No. FD 460 EXP-2/10, dated 23-12-2010.

By Order and in the name of the Governor of Karnataka
M.V. Krishnamurthy
Under Secretary to Government
Information Technology, Biotechnology
and Science & Technology Department

P.R. No. 119

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub :-** Constitution of Screening Committee for implementation of the incentives and concessions provided in the Millennium Bio-tech Policy.

**Read :-** 1. Government Order No. ITD 58 MDA 2008, dated : 18-07-2009.
2. Letter No. KBITS/PO(BT)/OG/F1/2010-11 sent by the Managing Director, KBITS.

**Preamble:**

Government were pleased to announce the Millennium Bio-tech Policy II in succession to the Millennium Bio-tech Policy issued in 2001 vide Government Order read at(1) above.

In the Bio-tech Policy II, various incentives and concessions have been announced to the Bio-tech companies. For scrutiny of applications received from entrepreneurs/start up companies/applicants for availing the incentives and concessions and also to assist Government in implementation of the policy, it is considered necessary to constitute a Committee with the following members :-

| | | |
|---|---|---|
| 1 | Director, Directorate of IT/BT | Chairman |
| 2 | Dr. H. Sharath Chandra, Prof. Emeritus, IISc., | Member |
| 3 | Dr. Padmanabhan Prof. Emeritus, IISc., | Member |
| 4 | Dr. KK Narayanan, MD, Methelix Life Sciences | Member |
| 5 | Dr. RK Agarwal, Chairman, Natural Remedies | Member |
| 6 | General Manager (BT) KBITS | Member Secretary |

**Government Order No. ITD 22 PRM 2010, Bangalore, dated : 30-12-2010**

In the circumstances explained in the preamble, Government are pleased to constitute Screening Committee for assisting the Government in implementation of the incentives and concessions provided in the Millennium Bio-tech Policy with the following members :-

| | | |
|---|---|---|
| 1 | Director, Directorate of IT/BT | Chairman |
| 2 | Dr. H. Sharath Chandra, Prof. Emeritus, IISc., | Member |
| 3 | Dr. Padmanabhan Prof. Emeritus, IISc., | Member |

| | | |
|---|---|---|
| 4 | Dr. KK Narayanan, MD, Methelix Life Sciences | Member |
| 5 | Dr. RK Agarwal, Chairman, Natural Remedies | Member |
| 6 | General Manager (BT) KBITS | Member Secretary |

By Order and in the name of the Governor of Karnataka
M.V. Krishnamurthy
Under Secretary to Government
Department of Information Technology,
Biotechnology and Science & Technology

P.R. No. 120

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2ನೇ ಹಂತದ ನಗರಗಳಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2010–11ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 1.00 ಕೋಟಿಗಳ ಅನುದಾನದಲ್ಲಿ ಉಳಿದ ರೂ. 50.00 ಲಕ್ಷಗಳನ್ನು ಕಿಯೋನಿಕ್ಸ್ ಸಂಸ್ಥೆಗೆ ಈಕ್ವಿಟಿ ಮೊತ್ತವಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 38 ಎಂಡಿಎ 2008, ದಿನಾಂಕ: 25–11–2008.
2. ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 38 ಎಂಡಿಎ 2008, ದಿನಾಂಕ: 25–2–2009.
3. ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 59 ಎಂಡಿಎ 2008, ದಿನಾಂಕ: 5–10–2009.
4. ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 38 ಎಂಡಿಎ 2008, ದಿನಾಂಕ: 21–11–2009.
5. ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 38 ಎಂಡಿಎ 2008, ದಿನಾಂಕ: 6–2–2010.
6. ಸರ್ಕಾರದ ಆದೇಶ ಸಂಖ್ಯೆ: ಐಟಿಡಿ 28 ಎಂಡಿಎ 2010, ದಿನಾಂಕ: 26–8–2010.
7. ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ಇವರ ಪತ್ರ ಸಂಖ್ಯೆ : ಕೆಎಸ್ಇಡಿಸಿ/ಐಡಿಸಿ/ಗ್ರ್ಯಾಂಟ್ಸ್/11–2010, ದಿನಾಂಕ : 11–11–2010, ಹಾಗೂ ನಿರ್ದೇಶಕರು (ನಿರ್ವಹಣೆ) ಕಿಯೋನಿಕ್ಸ್ ಇವರ ಪತ್ರ ಸಂಖ್ಯೆ : ಕೆಎಸ್ಇಡಿಸಿ/ಎಫ್&ಎ/2010–11, ದಿನಾಂಕ : 10–12–2010.

**ಪ್ರಸ್ತಾವನೆ :**

ಮೇಲೆ (1) ಮತ್ತು (3)ರಲ್ಲಿ ಓದಲಾದ ದಿನಾಂಕ : 25–11–2008 ಹಾಗೂ ದಿನಾಂಕ : 5–10–2009 ರ ಸರ್ಕಾರಿ ಆದೇಶದಲ್ಲಿ ಮೈಸೂರು ಮಂಗಳೂರಿನಲ್ಲಿ ರೂ. 31.68 ಕೋಟಿ ಹಾಗೂ ಶಿವಮೊಗ್ಗದಲ್ಲಿ ರೂ. 15.46 ಕೋಟಿ ವೆಚ್ಚದಲ್ಲಿ ಐಟಿ ಪಾರ್ಕ್‌ಗಳನ್ನು ಕಿಯೋನಿಕ್ಸ್‌ನ ಸ್ವಂತ ಬಂಡವಾಳ ಹಾಗೂ ಖಾಸಗಿ ಸಹಭಾಗಿತ್ವದ ಮಾದರಿಯಲ್ಲಿ (PPP Mode) ನಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳನ್ನು ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಮೇಲೆ (2) ಮತ್ತು (4) ರಲ್ಲಿ ಓದಲಾದ ದಿನಾಂಕ : 25–2–2009ರ ಹಾಗೂ ದಿನಾಂಕ : 21–11–2009 ಸರ್ಕಾರಿ ಆದೇಶದಲ್ಲಿ 2ನೇ ಹಂತದ ನಗರಗಳಾದಂತಹ ಮಂಗಳೂರು, ಮೈಸೂರು, ಶಿವಮೊಗ್ಗ, ಬೆಳಗಾಂ, ದಾವಣಗೆರೆ ಹಾಗೂ ಹುಬ್ಬಳ್ಳಿ–ಧಾರವಾಡದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸ್ವಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು"** ಅಡಿಯಲ್ಲಿ ಒದಗಿಸಲಾಗಿದ್ದ ಈಕ್ವಿಟಿ ಅನುದಾನದಲ್ಲಿ ರೂ. 5.00 ಕೋಟಿಗಳನ್ನು ಹಾಗೂ 2009–10ನೇ ಸಾಲಿನಲ್ಲಿ ರೂ. 250 ಲಕ್ಷ ಈಕ್ವಿಟಿ ಮೊತ್ತವಾಗಿ ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಹಂತ 2 ನಗರಗಳಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಸಲುವಾಗಿ 2009–10ನೇ ಸಾಲಿನಲ್ಲಿ ರೂ. 50.00 ಲಕ್ಷಗಳ ಈಕ್ವಿಟಿ ಮೊತ್ತವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (6)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಹಂತ 2 ನಗರಗಳಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಸಲುವಾಗಿ ರೂ. 50.00 ಲಕ್ಷಗಳ ಈಕ್ವಿಟಿ ಮೊತ್ತವನ್ನು ಕಿಯೋನಿಕ್ಸ್ ಸಂಸ್ಥೆಗೆ 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದೆ.

ಮೇಲೆ (7)ರಲ್ಲಿ ಓದಲಾದ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ : 11–11–2010ರ ಪತ್ರದಲ್ಲಿ ಮುಂದುವರೆದ ಯೋಜನೆಗಳನ್ನು ಅನುಷ್ಠಾನಗೊಳಿಸುವ ಸಲುವಾಗಿ 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸ್ವಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ 059 ಇತರೆ ಖರ್ಚು" ಇದರಡಿಯಲ್ಲಿ ಒದಗಿಸಲಾದ ರೂ. 100 ಲಕ್ಷಗಳಲ್ಲಿ ಉಳಿದ ರೂ. 50.00 ಲಕ್ಷಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಉಲ್ಲೇಖಿಸಿರುವ ಲೆಕ್ಕಶೀರ್ಷಿಕೆಯಡಿ ಲಭ್ಯವಿರುವ ಉಳಿದ ರೂ. 50 ಲಕ್ಷಗಳ ಈಕ್ವಿಟಿ ಮೊತ್ತವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಾತಂಇ 28 ಎಂಡಿಎ 2010, ಬೆಂಗಳೂರು, ದಿನಾಂಕ : 29–12–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಹಂತ–2 ನಗರಗಳಲ್ಲಿ ಐಟಿ ಪಾರ್ಕ್‌ಗಳನ್ನು ಸ್ಥಾಪಿಸುವ ಸಲುವಾಗಿ ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ **"5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸ್ವಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಿಸಲಾಗಿರುವ ರೂ. 100.00 ಲಕ್ಷಗಳಲ್ಲಿ ಉಳಿದ ರೂ. 50.00 ಲಕ್ಷಗಳ (ರೂ. ಐವತ್ತು ಲಕ್ಷಗಳು ಮಾತ್ರ) ಈಕ್ವಿಟಿ ಮೊತ್ತವನ್ನು ಕಿಯೋನಿಕ್ಸ್ ಸಂಸ್ಥೆಗೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಮೂಲಕ ಬಿಡುಗಡೆ ಮಾಡಲಾಗಿದೆ.

ಈಕ್ವಿಟಿ ಮೊತ್ತದ ಬಿಡುಗಡೆಯು ಮೇಲೆ 2ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 38 ಎಂಡಿಎ 2008 ದಿನಾಂಕ : 25–2–2009 ರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸ್ವಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)"** ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್‌ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–2) ಇವರ ಟಿಪ್ಪಣಿ ಸಂಖ್ಯೆ : ಆಇ 474 ವೆಚ್ಚ–2/10, ದಿನಾಂಕ : 22–12–2010 ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಎಂ.ವಿ. ಕೃಷ್ಣಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ. ಆರ್. 121

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎನ್.ಎಂ. ನೀಲಕಂಠ, ಕೆ.ಎ.ಎಸ್. (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಇವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರಡಿ ದಾಖಲಾದ ಪ್ರಕರಣದ ಅಭಿಯೋಜನಾ ಮಂಜೂರಾತಿ ಆದೇಶ.

**ಓದಲಾಗಿದೆ :** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 25–11–10ರ ಪತ್ರ ಮತ್ತು ಅಂತಿಮ ವರದಿ ಸಂಖ್ಯೆ : Lok/INV(G)/City/Crime-40/2010

**ಪ್ರಸ್ತಾವನೆ :**

ಶ್ರೀ ಎನ್. ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಇವರ ವಿರುದ್ಧ ಮೊಕದ್ದಮೆ ಸಂಖ್ಯೆ : 40/2010 ರಲ್ಲಿ ಆರಕ್ಷಕ ನಿರೀಕ್ಷಕರು, ಬೆಂಗಳೂರು ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸು ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ತಮ್ಮ ಪತ್ರದೊಂದಿಗೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು, ಲಂಚ ನಿರೋಧ ಕಾಯ್ದೆ, 1988ರ ಕಲಂ 19(1)(ಬಿ) ರಡಿ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

2. ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ತಮ್ಮ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಸಿ. ತಮ್ಮಯ್ಯ ಬಿನ್ ಲೇಟ್ ಚಿಕ್ಕಣ್ಣ ನಂ. 54/2ಬಿ, 7ನೇ ಕ್ರಾಸ್, ನಾಗದೇವನಹಳ್ಳಿ, ಜ್ಞಾನಭಾರತಿ ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು ಇವರ ಫಿರ್ಯಾದಿ ದಿನಾಂಕ : 16–9–10.
2. ಪ್ರಥಮ ವರ್ತಮಾನ ವರದಿ ದಿನಾಂಕ : 16–9–10 ಬೆಂಗಳೂರು ನಗರ ವಿಭಾಗ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ : 40/2010.
3. ಪ್ರಾಯೋಗಿಕ ಪಂಚನಾಮೆ ದಿನಾಂಕ : 16–9–10
4. ಟ್ರ್ಯಾಪ್ ಪಂಚನಾಮೆ ದಿನಾಂಕ : 16–9–2010.
5. ತನಿಖಾಧಿಕಾರಿಗಳು ಮ್ಯಾಜಿಸ್ಟ್ರೇಟ್ ರವರಿಗೆ ಕಳುಹಿಸಿದ ಸ್ವತ್ತಿನ ಪಟ್ಟಿಯಲ್ಲಿನ ಅಂಶಗಳು
6. ದಿನಾಂಕ 15–9–10 ರಂದು ಫಿರ್ಯಾದುದಾರರು ಮತ್ತು ಆರೋಪಿತರ ನಡುವೆ ನಡೆದ ಸಂಭಾಷಣೆಯ ಲಿಪೀಕರಣ.
7. ದಿನಾಂಕ : 16–9–10 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಆರೋಪಿ–2 ರ ನಡುವೆ ನಡೆದ ಹಾಗೂ digital voice recorder ನಲ್ಲಿ ದಾಖಲಾಗಿದ್ದ ಮೊದಲ ಸಂಭಾಷಣೆಯ ಲಿಪೀಕರಣ.
8. ದಿನಾಂಕ : 16–9–10 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಆರೋಪಿ–2 ರ ನಡುವೆ ನಡೆದ ಹಾಗೂ digital voice recorder ನಲ್ಲಿ ದಾಖಲಾಗಿದ್ದ ಎರಡನೇ ಸಂಭಾಷಣೆಯ ಲಿಪೀಕರಣ.
9. ದಿನಾಂಕ 16–9–10 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ಆರೋಪಿ–2 ಮತ್ತು ಆರೋಪಿ–1 ರ ನಡುವೆ ನಡೆದ ಹಾಗೂ digital voice recorder ನಲ್ಲಿ ದಾಖಲಾಗಿದ್ದ ಸಂಭಾಷಣೆಯ ಲಿಪೀಕರಣ.

10. ದಿನಾಂಕ 16–9–10 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಆರೋಪಿ–1 ರ ನಡುವೆ ನಡೆದ ಹಾಗೂ ವಿಡಿಯೋ ಚಿತ್ರೀಕರಣದಲ್ಲಿ ಧ್ವನಿಮುದ್ರಿತ ಸಂಭಾಷಣೆಯ ಲಿಪೀಕರಣ.
11. ದಿನಾಂಕ 16–9–10 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ತನಿಖಾಧಿಕಾರಿ ಮತ್ತು ಆರೋಪಿ–1 ರ ನಡುವೆ ನಡೆದ ಹಾಗೂ ವಿಡಿಯೋ ಚಿತ್ರೀಕರಣದಲ್ಲಿ ಧ್ವನಿಮುದ್ರಿತ ಸಂಭಾಷಣೆಯ ಲಿಪೀಕರಣ.
12. ಕೃತ್ಯ ನಡೆದ ಸ್ಥಳದ ನಕಾಶೆ.
13. ಸಹಾಯಕ ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಸಾಆಸಂ/ರಾಪ/ಲೋಕ್/97/10–11, ದಿನಾಂಕ : 21–9–10.
14. ದಿನಾಂಕ : 17–9–10 ರಂದು ಫಿರ್ಯಾದುದಾರರ ತನಿಖಾಧಿಕಾರಿಗಳ ಸಮಕ್ಷಮ ಮುಂದುವರಿದ ಹೇಳಿಕೆ.
15. ದಿನಾಂಕ : 16–9–10/17–9–10 ರಂದು ಕೆಳಕಂಡವರು ತನಿಖಾಧಿಕಾರಿಗಳ ಸಮಕ್ಷಮ ನೀಡಿದ ಹೇಳಿಕೆಗಳು.
    1. ಶ್ರೀ ಆರ್. ಶಾಂತರಾಜು, ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು.
    2. ಶ್ರೀ ಎಂ.ಡಿ. ದೇವರಾಜ್, ಡಿ ಗ್ರೂಪ್ ನೌಕರ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು
    3. ಶ್ರೀ ಇನಾಯತ್ ಪಾಶ, ಡಿ ಗ್ರೂಪ್ ನೌಕರ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು
    4. ಶ್ರೀ ರಾಜು, ವಾಹನ ಚಾಲಕ, ಡಿ ಗ್ರೂಪ್ ನೌಕರ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು
    5. ಶ್ರೀ ಎಸ್. ಸಿದ್ದೇಗೌಡ, ಜ್ಯೂನಿಯರ್ ಸ್ಟಾಟಿಸ್ಟಿಕಲ್ ಅಸಿಸ್ಟೆಂಟ್, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು.
    6. ಶ್ರೀ ಎಂ.ಕೆ. ಶ್ರೀನಿವಾಸರೆಡ್ಡಿ, ಪ್ರಥಮ ದರ್ಜೆ ಸಹಾಯಕ, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು.
16. ಆರೋಪಿತರ ಮುದ್ರಿತ ಧ್ವನಿಗಳನ್ನು ಗುರುತಿಸಿ ಶ್ರೀ ನಂಜುಂಡೇಶ್ವರ, ಅಪರ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರ ದಿನಾಂಕ : 17–9–10ರ ಪತ್ರ.
17. (1) ಶ್ರೀ ದೇಶಿಕ, ಪೊಲೀಸ್ ಹೆಡ್ ಕಾನ್ಸ್‌ಟೇಬಲ್ (2) ಶ್ರೀಮತಿ ಮಮತ, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ (3) ಶ್ರೀ ರಾಮಯ್ಯ, ಪೊಲೀಸ್ ಕಾನ್ಸ್‌ಟೇಬಲ್ (4) ಶ್ರೀ ರಮೇಶ್, ಪೊಲೀಸ್ ಕಾನ್ಸ್‌ಟೇಬಲ್ (5) ಶ್ರೀ ಸಿ. ವೆಂಕಟೇಶ್, ಪೊಲೀಸ್ ಕಾನ್ಸ್‌ಟೇಬಲ್ (6) ಶ್ರೀ ಶ್ರೀನಿವಾಸ, ಪೊಲೀಸ್ ಕಾನ್ಸ್‌ಟೇಬಲ್ (7) ಶ್ರೀ ಕೃಷ್ಣಪ್ಪ, ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು (8) ಶ್ರೀ ಬಿ.ಎನ್. ಕೃಷ್ಣಮೂರ್ತಿ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ ಇವರುಗಳ ಹೇಳಿಕೆಗಳು
18. ತನಿಖಾ ವರದಿಯೊಂದಿಗಿರುವ ಲಂಚ ಕೇಳಲು ಆಧಾರವಾದ ಕಡತ ಸಂಖ್ಯೆ : LAC 848/86-87 ರ ನಕಲು ಪ್ರತಿ.
19. ದಿನಾಂಕ : 16–9–10ರ ಆಪಾದಿತರ ಸಮಜಾಯಿಷಿ ಹೇಳಿಕೆಗಳು.

3. ತನಿಖಾಧಿಕಾರಿ ಶ್ರೀ ಲಕ್ಷ್ಮೀನಾರಾಯಣ, ಆರಕ್ಷಕ ನಿರೀಕ್ಷಕರು, ಬೆಂಗಳೂರು ನಗರ ವಿಭಾಗ ಕರ್ನಾಟಕ ಲೋಕಾಯುಕ್ತ ಇವರು ಶ್ರೀ ಎನ್.ಎಂ. ನೀಲಕಂಠ ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ವಿಭಾಗ ಪೊಲೀಸು ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ : 40/2010 ರಲ್ಲಿ ಲಂಚ ನಿರೋಧ ಕಾಯ್ದೆ, 1988 ರ ಕಲಂ 7, 13(1) (ಡಿ) ರ ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ದಿನಾಂಕ : 16–9–10 ರಂದು ದಾಖಲಿಸಿಕೊಂಡಿರುತ್ತಾರೆ.

4. ಶ್ರೀ ಸಿ. ತಮ್ಮಯ್ಯ ಬಿನ್ ಲೇಟ್ ಚಿಕ್ಕಣ್ಣ, ನಂ. 54/2ಬಿ, 7ನೇ ಕ್ರಾಸ್, ನಾಗದೇವನಹಳ್ಳಿ, ಜ್ಞಾನಭಾರತಿ ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು ಇವರಿಗೆ ಸೇರಿದ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ನಾಗದೇವನಹಳ್ಳಿ ಗ್ರಾಮದ ಸರ್ವೆ ನಂ. 52/8 ರಲ್ಲಿ 00–29 ಎಕರೆ ಮತ್ತು ಸರ್ವೆ ನಂ. 10.3 ರಲ್ಲಿ 01–17 ಎಕರೆ ಜಮೀನುಗಳನ್ನು ಕಲ್ಯಾಣ್ ಹೌಸಿಂಗ್ ಕೋ–ಆಪರೇಟೀವ್ ಸೊಸೈಟಿಯ ಪರವಾಗಿ ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆ ನಡೆದಿದ್ದು, ಜಮೀನನ್ನು ಭೂ ಮಾಲೀಕರಿಗೆ ವಾಪಸು ನೀಡಲು ಅಗತ್ಯವಾದ ದಾಖಲಾತಿಗಳನ್ನು ತಯಾರಿಸಿ ಭೂ ಮಾಲೀಕರಿಗೆ ಅನುಕೂಲಕರ ರೀತಿಯಲ್ಲಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಆರೋಪಿ–1 ಶ್ರೀ ಎನ್.ಎಂ. ನೀಲಕಂಠ, ಇವರು ಐವತ್ತು ಸಾವಿರ ರೂಪಾಯಿಗಳ ಲಂಚದ ಹಣವನ್ನು ನೀಡುವಂತೆ ಶ್ರೀ ತಮ್ಮಯ್ಯ ನವರಿಗೆ ಒತ್ತಾಯಿಸಿದ್ದು, ನಂತರ ಹತ್ತು ಸಾವಿರ ರೂಪಾಯಿಗಳ ಲಂಚದ ಹಣಕ್ಕೆ ಒಪ್ಪಿಕೊಂಡಿದ್ದು, ಆರೋಪಿ–2 ಶ್ರೀ ತಿಪ್ಪಯ್ಯ, ರೆವಿನ್ಯೂ ಇನ್ಸ್‌ಪೆಕ್ಟರ್ ಇವರೂ ಸಹ ಆರೋಪಿ–1 ರವರ ಸೂಚನೆಯಂತೆ ಹತ್ತು ಸಾವಿರ ರೂಪಾಯಿಗಳ ಲಂಚದ ಹಣಕ್ಕೆ ಒತ್ತಾಯಿಸಿದ್ದು, ಇದನ್ನು ನೀಡಲು ಇಷ್ಟವಿಲ್ಲದ ಶ್ರೀ ತಮ್ಮಯ್ಯನವರು ಆರೋಪಿ–1 ಮತ್ತು 2 ರವರೊಂದಿಗೆ ಲಂಚದ ವಿಷಯವಾಗಿ ನಡೆಸಿದ ಸಂಭಾಷಣೆಯನ್ನು ತಮ್ಮ ಮೊಬೈಲ್ ದೂರವಾಣಿಯಲ್ಲಿ ದಾಖಲಿಸಿಕೊಂಡಿದ್ದನ್ನು ಸಿಡಿಗೆ ವರ್ಗಾಯಿಸಿರುತ್ತಾರೆ. ದಿನಾಂಕ : 15–6–10 ರಂದು ನಡೆದ ಈ ವಿದ್ಯಮಾನಗಳನ್ನು ಲಿಖಿತವಾಗಿ ವಿವರಿಸುತ್ತಾ, ಆರೋಪಿತರ ವಿರುದ್ಧ ಕ್ರಮ ಕೈಗೊಳ್ಳುವಂತೆ ಲೋಕಾಯುಕ್ತ ಪೊಲೀಸರಿಗೆ ದಿನಾಂಕ : 16–6–10 ರಂದು ಸಿಡಿಯೊಂದಿಗೆ ದೂರು ದಾಖಲಿಸಿರುತ್ತಾರೆ. ಇದರೊಂದಿಗೆ ಫಿರ್ಯಾದಿ ಜಮೀನು ಸ್ವಾಧೀನತೆಯನ್ನು ಕೈಬಿಡುವ ಬಗ್ಗೆ ಮಾನ್ಯ ಮುಖ್ಯ ಮಂತ್ರಿಯವರಿಗೆ ಸಲ್ಲಿಸಿದ ಅರ್ಜಿ ಮುಖ್ಯ ಮಂತ್ರಿಯವರ ಕಛೇರಿಯಿಂದ ಫಿರ್ಯಾದಿಗೆ ಬಂದ ಉತ್ತರ, ಇವುಗಳನ್ನು ಪರಿಶೀಲಿಸುವಂತೆ ಆರೋಪಿ–1 ರವರು ಆರೋಪಿ–2 ರವರಿಗೆ ಆದೇಶಿಸಿದ ಜ್ಞಾಪನ ಪತ್ರಗಳ ಪ್ರತಿಯನ್ನು ದೂರಿನೊಂದಿಗೆ ಲಗತ್ತಿಸಿರುತ್ತಾರೆ.

5. ಟ್ರ್ಯಾಪ್ ಪೂರ್ವದ ಪ್ರಾಯೋಗಿಕ ಕ್ರಮಗಳನ್ನು ಕೈಗೊಂಡ ನಂತರ ದಿನಾಂಕ : 16–9–10 ರಂದು ತನಿಖಾಧಿಕಾರಿ ಹಾಗೂ ಇತರೇ ಸಿಬ್ಬಂದಿಯು ಫಿರ್ಯಾದಿಯೊಂದಿಗೆ ಆರೋಪಿತರ ಕಛೇರಿಯಾದ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ. ಅಂಬೇಡ್ಕರ್ ರಸ್ತೆ, ಬಳಿ ತೆರಳಿ ಫಿರ್ಯಾದಿಯನ್ನು ಕಛೇರಿ ಕಟ್ಟಡದ ಒಳಗೆ ಕಳುಹಿಸಿರುತ್ತಾರೆ ಸ್ವಲ್ಪ ಸಮಯದ ನಂತರ ಫಿರ್ಯಾದಿ ಮತ್ತು ಆರೋಪಿ–2 ಕಛೇರಿ ಕಟ್ಟಡದಿಂದ ಹೊರಬಂದು ಮುಂಭಾಗದ ಮುಖ್ಯರಸ್ತೆಯಲ್ಲಿ ಆಟೋರಿಕ್ಷಾದ ಮೂಲಕ ಕೆ.ಆರ್. ವೃತ್ತದ ಕಡೆಗೆ ಹೊರಟು, ಲೋಕಾಯುಕ್ತ ಕಛೇರಿಯ ಮುಂಭಾಗದ ರಸ್ತೆಯ ಕಬ್ಬನ್ ಪಾರ್ಕ್ ಬದಿಯಲ್ಲಿರುವ ಸಣ್ಣ ಟೀ ಅಂಗಡಿ ಮುಂಭಾಗ ಆಟೋರಿಕ್ಷಾ ನಿಲ್ಲಿಸಿ ಇಳಿದಿರುತ್ತಾರೆ. ಇವರನ್ನು ಹಿಂಬಾಲಿಸಿ ಬಂದ ತನಿಖಾಧಿಕಾರಿಯ ತಂಡವು, ಫಿರ್ಯಾದಿಯು ನೀಡಿದ ಗುಪ್ತ ಸೂಚನೆಯನ್ನು ಅನುಸರಿಸಿ ತನಿಖಾಧಿಕಾರಿಗಳು ಅವರ ಬಳಿ ತೆರಳಿ, ಬಂದ ಉದ್ದೇಶವನ್ನು ಆರೋಪಿ–2 ಗೆ ತಿಳಿಸಿರುತ್ತಾರೆ. ಎಂ.ಎಸ್. ಬಿಲ್ಡಿಂಗ್ ಕಡೆ ಹೊರಟ ಮಾರ್ಗಮಧ್ಯೆ ಆಟೋರಿಕ್ಷಾದಲ್ಲಿ ಕುಳಿತಿದ್ದ ಆರೋಪಿ–2

ಫಿರ್ಯಾದಿಗೆ ಲಂಚದ ಹಣವನ್ನು ಕೊಡುವಂತೆ ಕೇಳಿದ ಮೇರೆಗೆ ಫಿರ್ಯಾದಿಯು ಈ ಮೊದಲೇ ಫಿನಾಪ್ತಿಲಿನ್ ರಾಸಾಯನಿಕ ಲೇಪಿಸಿದ್ದ ಹತ್ತು ಸಾವಿರ ರೂಪಾಯಿಗಳನ್ನು ಆರೋಪಿ-2 ಗೆ ನೀಡಿರುತ್ತಾರೆ. ಈ ಹಣವನ್ನು ಆರೋಪಿ-2 ತನ್ನ ಎರಡೂ ಹಸ್ತಗಳಲ್ಲಿ ಎಣಿಸಿಕೊಂಡು ತಮ್ಮ ಬಳಿ ಇಟ್ಟುಕೊಂಡಿರುತ್ತಾರೆಂದು ಫಿರ್ಯಾದಿಯು ಲಂಚದ ಹಣವನ್ನು ನೀಡಿದ/ ಪಡೆದ ವಿಧಾನವನ್ನು ತನಿಖಾಧಿಕಾರಿಗೆ ವಿವರಿಸಿರುತ್ತಾರೆ. ನಂತರ ತನಿಖಾಧಿಕಾರಿಯ ಸೂಚನೆಯ ಮೇರೆಗೆ ಆರೋಪಿ-2 ತನ್ನ ಮೊಬೈಲ್ ದೂರವಾಣಿ ಮೂಲಕ ಆರೋಪಿ-1ರ ಮೊಬೈಲ್ ದೂರವಾಣಿಗೆ ಕರೆಮಾಡಿ, ಫಿರ್ಯಾದಿಯು ಹತ್ತು ಸಾವಿರ ರೂಪಾಯಿಗಳ ಲಂಚದ ಹಣವನ್ನು ನೀಡಿರುವರೆಂದು ಆರೋಪಿ-2 ತಿಳಿಸಿದಾಗ, ಆರೋಪಿ-1 ರವರು ಹಣವನ್ನು ಆರೋಪಿ-2 ರ ಬಳಿಯೇ ಇಟ್ಟುಕೊಂಡಿರುವಂತೆ, ತಾನು ಅರ್ಧ ಗಂಟೆಯ ಒಳಗಾಗಿ ಕಛೇರಿಗೆ ಬಂದು ಈ ಹಣವನ್ನು ಸ್ವೀಕರಿಸುವುದಾಗಿ ತಿಳಿಸಿರುತ್ತಾರೆ. ಮೊಬೈಲ್ ದೂರವಾಣಿಯ loud speaker ಅನ್ನು ಚಾಲನೆಯಲಿಟ್ಟು ನಡೆದ ಈ ಸಂಭಾಷಣೆಯನ್ನು digital voice recorder ದಾಖಲು ಮಾಡಿಕೊಳ್ಳಲಾಗಿರುತ್ತದೆ. ಟ್ರ್ಯಾಪ್ ನಡೆದ ಸ್ಥಳವು ಸಾರ್ವಜನಿಕ ರಸ್ತೆಯಾಗಿದ್ದು, ಅಗತ್ಯ ಸೌಕರ್ಯಗಳಿಲ್ಲದ ಕಾರಣ, ಹತ್ತಿರದಲ್ಲೇ ಇದ್ದ ತನಿಖಾಧಿಕಾರಿಗಳ ಕಛೇರಿಯಲ್ಲಿ ನಡೆದ ಟ್ರ್ಯಾಪ್ ಪಂಚನಾಮೆಯಲ್ಲಿ ಆರೋಪಿ-2 ರವರ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸಿದ್ದಪಡಿಸಲಾಗಿದ್ದ ಸೋಡಿಯಂ ಕಾರ್ಬೋನೇಟ್ ರಾಸಾಯನಿಕ ದ್ರಾವಣದಲ್ಲಿ ಅದ್ದಿ ತೊಳೆದಾಗ ಬಣ್ಣರಹಿತವಾದ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ರೂಪಾಂತರಗೊಂಡಿರುತ್ತದೆ.

6. ಫಿರ್ಯಾದಿಯಿಂದ ಪಡೆದ ಲಂಚದ ಹಣವನ್ನು ಆರೋಪಿ-2 ರವರು ತಾವು ಧರಿಸಿರುವ ಪ್ಯಾಂಟಿನ ಮುಂಭಾಗದ ಬಲಭಾಗದ ಒಳಭಾಗದ ಸೊಂಟದ ಜೇಬಿನಲ್ಲಿಟ್ಟುಕೊಂಡಿದ್ದ ನೋಟುಗಳನ್ನು ವಶಪಡಿಸಿಕೊಳ್ಳಲಾಗಿದ್ದು, ಈ ಮೊದಲೇ ಫಿನಾಪ್ತಲಿನ್ ಪುಡಿಯನ್ನು ಹಚ್ಚಿ ಲಂಚದ ಹಣವೆಂದು ನೀಡುವ ಸಲುವಾಗಿ ಫಿರ್ಯಾದಿಗೆ ನೀಡಿದ ಹಣವಾಗಿರುತ್ತದೆ. ಈ ಮೊದಲೇ ಗುರುತಿಸಿಕೊಳ್ಳಲಾಗಿದ್ದ ನೋಟುಗಳ ಸಂಖ್ಯೆಗಳು ತಾಳೆಯಾಗಿರುತ್ತದೆ.

7. ಟ್ರ್ಯಾಪ್ ಪ್ರಕ್ರಿಯೆ ಅಂಗವಾಗಿ ಫಿರ್ಯಾದಿಗೆ ನೀಡಲಾಗಿದ್ದ digital voice recorder and button camera ದಲ್ಲಿನ ವಿವರಗಳನ್ನು ಕಂಪ್ಯೂಟರಿಗೆ ಅಳವಡಿಸಿ ನೋಡಲಾಗಿ, button camera ದಲ್ಲಿ ಆರೋಪಿ-2 ರವರು ಸ್ಪಷ್ಟವಾಗಿ ಕಾಣಿಸುತ್ತಿದ್ದು, ಫಿರ್ಯಾದಿಯೊಂದಿಗೆ ಲಂಚದ ವಿಷಯವಾಗಿ ನಡೆದ ಸಂಭಾಷಣೆ, ಆಟೋರಿಕ್ಷಾದ ಒಳಭಾಗ, ಅಂಬೇಡ್ಕರ್ ಬೀದಿ ಆರೋಪಿ-2 ಲಂಚದ ಹಣವನ್ನು ಎಣಿಸುತ್ತಿರುವುದು ಇತ್ಯಾದಿ ದೃಶ್ಯಗಳು ಕಂಡುಬಂದಿರುತ್ತದೆ. ಹಾಗೆಯೇ ಲಂಚದ ಹಣವನ್ನು ಪಡೆದ ನಂತರ ಆರೋಪಿ-2 ರವರು ಆರೋಪಿ-1 ರವರೊಂದಿಗೆ ನಡೆಸಿದ ಮೊಬೈಲ್ ದೂರವಾಣಿ ಸಂಭಾಷಣೆಯು ಸ್ಪಷ್ಟವಾಗಿ ಕೇಳಿಸಿರುತ್ತದೆ.

8. ನಂತರದ ಬೆಳವಣಿಗೆಯಲ್ಲಿ ಆರೋಪಿ-1 ರವರು ಆರೋಪಿ-2 ರವರನ್ನು ಕಛೇರಿ ಸಿಬ್ಬಂದಿ ಶ್ರೀ ಶಾಂತರಾಜು ರವರ ಮೂಲಕ ಮೊಬೈಲ್ ದೂರವಾಣಿಯಲ್ಲಿ ಸಂಪರ್ಕಿಸಿ ಕಛೇರಿಗೆ ಬರುವಂತೆ ತಿಳಿಸಿದ್ದರ ಮೇರೆಗೆ ಆರೋಪಿ-2 ಮತ್ತು ಟ್ರ್ಯಾಪ್ ತಂಡವು ಕಛೇರಿ ಬಳಿ ತೆರಳಿದಾಗ ಆರೋಪಿ-1 ರ ಕಚೇರಿಯ ಪೋಡಿಯಂ ಬ್ಲಾಕ್ ಮುಂಭಾಗ ಆರೋಪಿ-1 ರವರು ಸರ್ಕಾರಿ ವಾಹನದಲ್ಲಿ ಕುಳಿತಿರುವುದನ್ನು ತನಿಖಾಧಿಕಾರಿಯವರು ಕಂಡು ತಮ್ಮ ಪರಿಚಯ ಹಾಗೂ ಬಂದ ಉದ್ದೇಶವನ್ನು ತಿಳಿಸುತ್ತಾ, ಆರೋಪಿಗಳನ್ನು ಆರೋಪಿಗಳ ಕಛೇರಿಗೆ ಕರೆದುಕೊಂಡು ಹೋಗುತ್ತಾ, ಫಿರ್ಯಾದಿಗೆ ಸಂಬಂಧಿಸಿದ ಮೂಲ ಕಡತ ಸಂಖ್ಯೆ : LAC/848/86-87 ರ ಜೆರಾಕ್ಸ್ ಪ್ರತಿಗಳನ್ನು ತನಿಖಾಧಿಕಾರಿಗಳು ಅಮಾನತ್ತು ಪಡಿಸಿಕೊಂಡಿರುತ್ತಾರೆ.

9. ತನಿಖಾಧಿಕಾರಿಯವರು ಲಂಚದ ಹಣ ಪಡೆದ ಬಗ್ಗೆ ಆರೋಪಿ-1 ರವರನ್ನು ಪ್ರಶ್ನಿಸಿ, ಉತ್ತರಗಳನ್ನು ಪಡೆದು ಇದನ್ನು video camera and digital voice recorder ನಲ್ಲಿ ದಾಖಲಿಸಿಕೊಂಡಿರುತ್ತಾರೆ.

10. ಈ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ, ಆರೋಪಿ-1 ಶ್ರೀ ನೀಲಕಂಠ ರವರು ತಾನು ಮುಗ್ದನೆಂದು ಇತ್ಯಾದಿಯಾಗಿ ಪ್ರತಿ ರಕ್ಷಣಾ ಹೇಳಿಕೆ ನೀಡಿರುತ್ತಾರೆ. ಆರೋಪಿ-2 ಶ್ರೀ ತಿಪ್ಪಯ್ಯ ರವರು ಶ್ರೀ ಎನ್.ಎಂ. ನೀಲಕಂಠ, ವಿಶೇಷ ಭೂಸ್ವಾಧೀನಾಧೀಕಾರಿಗಳು ಸುಮಾರು 3-4 ದಿನಗಳ ಹಿಂದೆಯೇ ಕಛೇರಿಯಲ್ಲಿ ತಮ್ಮಯ್ಯ ರವರ ಮನವಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು 10 ಸಾವಿರ ರೂಪಾಯಿಗಳನ್ನು ಕೊಡುತ್ತಾರೆ. ಇದನ್ನು ತೆಗೆದುಕೊಂಡು ರೆಕಾರ್ಡ್ ಅನ್ನು ಕಳುಹಿಸಿಕೊಡು ಹಣವನ್ನು ಕೊಡದೆ ರೆಕಾರ್ಡ್ ಅನ್ನು ಕಳುಹಿಸಬಾರದೆಂದು ನಿರ್ದೇಶನ ನೀಡಿದ ಮೇರೆಗೆ ಹಣವನ್ನು ಕೊಂಡಿರುತ್ತೇನೆ. ಇದರಲ್ಲಿ ನನ್ನದೇನು ಪಾತ್ರವಿಲ್ಲ, ನಾನು ತಮ್ಮಯ್ಯನ ಹತ್ತಿರ ಹಣ ಕೇಳಿರುವುದಿಲ್ಲ. ಈ ಕಡತಕ್ಕೂ ನನಗೂ ಸಂಬಂಧವಿಲ್ಲವೆಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

11. ಫಿರ್ಯಾದಿಯ ದೂರು ದೂರಿನೊಂದಿಗೆ ಹಾಜರುಪಡಿಸಿದ ಸಂಭಾಷಣೆಯುಳ್ಳ ಸಿ.ಡಿ. ಆರೋಪಿ-2 ರವರ ಲಿಖಿತ ವರದಿ ಟ್ರ್ಯಾಪ್ ಪಂಚನಾಮೆಯ ದೃಷ್ಯಾವಳಿ ಹಾಗೂ ಸಂಭಾಷಣೆ ಇತ್ಯಾದಿಗಳನ್ನು ವಿಶ್ಲೇಷಿಸಿದಾಗ, ಆರೋಪಿ-1 ಮುಗ್ದ ಎಂದು ಲಿಖಿತವಾಗಿ ತಿಳಿಸಿರುವುದು ಸಮಂಜಸವಲ್ಲ, ಹಾಗೆಯೇ ಈ ಕೇಸಿಗೂ ತನಗೂ ಸಂಬಂಧವಿಲ್ಲವೆಂದು ಆರೋಪಿ-2 ರವರ ಲಿಖಿತ ವರದಿಯು ಸುಳ್ಳೆಂದು ದೃಢಪಡುತ್ತದೆ.

12. ಮೇಲ್ಕಂಡ ತನಿಖಾ ವರದಿಯನ್ನು ಸಕ್ಷಮ ಪ್ರಾಧಿಕಾರವು ಮೇಲ್ಕಂಡಂತೆ ಕೂಲಂಕಷವಾಗಿ ಪರಿಶೀಲಿಸುತ್ತಾ ಹಾಗೂ ಕಂಡಿಕೆ 2 ರಲ್ಲಿರುವ ಪೂರಕ ದಾಖಲೆಗಳನ್ನು ಪರಿಶೀಲಿಸಿದ ನಂತರ ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ರವರನ್ನು ಲಂಚ ನಿರೋಧ ಕಾಯ್ದೆಯಡಿ ಅಭಿಯೋಜನೆಗೆ ಒಳಪಡಿಸಲು ಸಾಕಷ್ಟು ಸಮರ್ಥನೀಯ ಕಾರಣಗಳು ಇರುವುದನ್ನು ಮನಗಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 042 ಕೆಇವಿ 10, ಬೆಂಗಳೂರು, ದಿನಾಂಕ : 27ನೇ ಡಿಸೆಂಬರ್, 2010**

ಆರೋಪಿ-1 ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಇವರನ್ನು ಲಂಚ ನಿರೋಧ ಕಾಯ್ದೆ 1988 ರ ಕಲಂ 7 13(1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಪಡಿಸಲು ಲಂಚ ನಿರೋಧ ಕಾಯ್ದೆ 1988 ರ ಕಲಂ 19(1)(ಬಿ) ರನ್ವಯ ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ಪ್ರಕಾರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ : 27-12-10 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ॥ ಎಂ.ಟಿ. ರೇಜು**

ಸರ್ಕಾರದ ಉಪ ಕಾರ್ಯದರ್ಶಿ,

ಪಿ. ಆರ್. 122 ಸಿ.ಆ.ಸು. ಇಲಾಖೆ (ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಆರ್. ಶಿವಲಿಂಗಯ್ಯ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಕೆ. ದುರ್ಗಾನಾಯಕ್, ಹಿರಿಯ ಸಹಾಯಕ ಇವರುಗಳ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ– ಆದೇಶ.

**ಓದಲಾಗಿದೆ :** 1. ನೋಟಿಸ್ ಸಂಖ್ಯೆ : ಸಿಆಸುಇ 07 ಸೇಇವಿ 2010, ದಿನಾಂಕ : 18–10–2010.

2. ಶ್ರೀ ಎಸ್.ಆರ್. ಶಂಕರ್, ಅಧೀನ ಕಾರ್ಯದರ್ಶಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 2–11–2010

3. ಶ್ರೀ ಕೆ. ದುರ್ಗಾನಾಯಕ್, ಹಿರಿಯ ಸಹಾಯಕ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 26–11–2010

**ಪ್ರಸ್ತಾವನೆ :**

ಶ್ರೀ ಆರ್. ಶಿವಲಿಂಗಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಕೆ. ದುರ್ಗಾನಾಯಕ್, ಹಿರಿಯ ಸಹಾಯಕ ಇವರುಗಳು ಈ ಹಿಂದೆ ಯೋಜನಾ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ತಮ್ಮ ಹಂತದಲ್ಲಿಯೇ ನಕಲಿ ಪತ್ರ ಸೃಷ್ಟಿಸಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ರವಾನಿಸಿ, ಸದರಿ ಮಂಡಳಿಯ ಕಾಮಗಾರಿ ಬದಲಾವಣೆಗೆ ಅನುಮೋದನೆ ನೀಡುವ ಮೂಲಕ ಕ.ನಾ.ಸೇ (ನಡತೆ) ನಿಯಮಗಳು 1966ರನ್ನು ಉಲ್ಲಂಘಿಸಿ, ದುರ್ನಡತೆ ಎಸಗಿರುವ ಆರೋಪಕ್ಕಾಗಿ ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ರ ಅನ್ವಯ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ : 18–10–2010 ರಲ್ಲಿ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ಆರ್. ಶಿವಲಿಂಗಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಕೆ. ದುರ್ಗಾನಾಯಕ್, ಹಿರಿಯ ಸಹಾಯಕ ಇವರುಗಳು ಕ್ರಮವಾಗಿ ಮೇಲೆ ಕ್ರ.ಸಂ. (2) ಹಾಗೂ (3) ರಲ್ಲಿ ಓದಲಾದ ಮನವಿಯಲ್ಲಿ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಅವರ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಸದರಿಯವರುಗಳ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಅವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವ ಅಂಶಗಳು ಕಂಡು ಬರುತ್ತಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ, ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 07 ಸೇಇವಿ 2010, ಬೆಂಗಳೂರು, ದಿನಾಂಕ : 23–12–2010.**

ಶ್ರೀ ಆರ್. ಶಿವಲಿಂಗಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಸ್ತುತ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ) ಹಾಗೂ ಶ್ರೀ ಕೆ. ದುರ್ಗಾನಾಯಕ್, ಹಿರಿಯ ಸಹಾಯಕ (ಪ್ರಸ್ತುತ ಸಾರ್ವಜನಿಕ ಉದ್ದಿಮೆಗಳ ಇಲಾಖೆ) ಇವರುಗಳ ವಿರುದ್ಧದ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ) ರ ಅನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ (1 & 2), ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡುತ್ತದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಗಾಗಿ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007 ದಿನಾಂಕ : 11–4–2008 ರಲ್ಲಿ ನಿಗಧಿಪಡಿಸಲಾಗಿರುವ ಗೌರವಧನ ಹಾಗೂ ವಾಹನ ಭತ್ಯೆಗಳನ್ನು ಪಡೆಯಲು ಅರ್ಹರಾಗಿರುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಸರ್ಕಾರದ ಉಪ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರು ಕ್ರಮ ಕೈಗೊಳ್ಳುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3)

ಪಿ. ಆರ್. 123

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎಂ. ಕೃಷ್ಣ. ಕೆ.ಎ.ಎಸ್ ನಿವೃತ್ತ ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ– ಅಂತಿಮ ಆದೇಶ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ** : ಸರ್ಕಾರಿ ಆದೇಶ ಸಂ:ಸಿಆಸುಇ 47 ಎಸ್ಇಎನ್ 83 ದಿಃ 21–09–1996.

**ಪ್ರಸ್ತಾವನೆ:**

ಶ್ರೀ ಎಂ ಕೃಷ್ಣ, ಕೆ.ಎ.ಎಸ್ (ನಿ) ಅಧಿಕಾರಿ ಇವರು ರಾಯಚೂರು ಜಿಲ್ಲೆ ಗಂಗಾವತಿ ತಾಲ್ಲೂಕು ಭೂನ್ಯಾಯ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಭೂ ಸುಧಾರಣೆ ಕಾಯಿದೆ ನಿಯಮಗಳಿಗೆ ವ್ಯತಿರಿಕ್ತವಾಗಿ ವರ್ತಿಸಿದ ಆರೋಪಕ್ಕಾಗಿ ಸದರಿ ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ ನಡೆದಿದ್ದು ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂ: (1)ರ ಆದೇಶದಲ್ಲಿ ಶ್ರೀ ಎಂ.ಕೃಷ್ಣ, ಕೆ.ಎ.ಎಸ್ ನಿವೃತ್ತ ಅಧಿಕಾರಿ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರಿಗೆ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಶಿಸ್ತು

ಪ್ರಾಧಿಕಾರವು ವಿಧಿಸಿದ ದಂಡನೆಯ ಆದೇಶದ ವಿರುದ್ಧ ಶ್ರೀ ಎಂ.ಕೃಷ್ಣ, ಕೆಎಎಸ್(ನಿ) ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂ: 911/1997 ಅನ್ನು ದಾಖಲಿಸಿ ತಮ್ಮ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ವಿಧಿಸಲಾಗಿದ್ದ ದಂಡನೆಯನ್ನು ರದ್ದುಗೊಳಿಸುವಂತೆ ಕೋರಿದ್ದರು.

ಈ ಸಂಬಂಧವಾಗಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿ: 26–11–08 ರಂದು ಈ ಕೆಳಕಂಡಂತೆ ಆದೇಶವನ್ನು ನೀಡಿರುತ್ತದೆ.

Since the very inquiry was in respect of a judicial functioning of the applicant, taking into consideration that the decision was a collective decision of the Land Tribunal, Gangavathi and not that of only the Chairman of the Tribunal, we find that it is not a fir case wherein liberty has to be reserved to the Government to consider the matter once again. Besides, the learned counsel for the applicant submits that the applicant has taken voluntary retirement and is no more in service.

For the above said reasons, we allow the application and quash the Government Order bearing No. ಸಿಆಸುಇ 47 ಎಸ್ಇಎನ್ 83 Dt: 21-09-1996. We direct that all consequential benefits shall be given to the applicant.

ಆದುದರಿಂದ ಶ್ರೀ ಎಂ.ಕೃಷ್ಣ. ಕೆ.ಎ.ಎಸ್ (ನಿ) ರವರು ಕೆ.ಎ.ಟಿಯಲ್ಲಿ ದಾಖಲಿಸಿರುವ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಇವರಿಗೆ ವಿಧಿಸಿದ ದಂಡನೆಯ ಆದೇಶವನ್ನು ರದ್ದುಗೊಳಿಸಿ ತಡೆಹಿಡಿದಿರುವ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಲು ನಿರ್ಣಯಿಸಲಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಎಸ್ಇಎನ್ 1997 (ಸಿಆಸುಇ 208 ಕೆಇವಿ 2007).**

**ಬೆಂಗಳೂರು ದಿನಾಂಕ: 28ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಎಂ. ಕೃಷ್ಣ ನಿವೃತ್ತ ಕೆ.ಎ.ಎಸ್ ಅಧಿಕಾರಿ ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ಸಂ: ಸಿಆಸುಇ 47 ಎಸ್ಇನ್ 83 ದಿ: 21–09–1996 ರಲ್ಲಿ ಅವರ ಎರಡು ವಾರ್ಷಿಕ ವೇತನಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆ ಹಿಡಿದು ವಿಧಿಸಲಾಗಿದ್ದ ದಂಡನೆಯನ್ನು ರದ್ದುಗೊಳಿಸಲಾಗಿದೆ. ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅವರ ಮೇಲಿನ ಆರೋಪಗಳಿಂದ ಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಪಿ.ಆರ್ 124

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ. ಆರ್. ನಾರಾಯಣ್ ಕೆ.ಎ.ಎಸ್ ಅಧಿಕಾರಿ ಹಾಗೂ ಇತರೆ 08 ಜನ ಆರೋಪಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂ: ಸಿಆಸುಇ 45 ಎಸ್ಇಎನ್ 07 (ಸಿಆಸುಇ 75 ಕೆಇವಿ 2007) ದಿ: 29–01–2008
2. ಸರ್ಕಾರಿ ಆದೇಶ ಸಂ: ಸಿಆಸುಇ 45 ಎಸ್ಇಎನ್ 07 (ಸಿಆಸುಇ 75 ಕೆಇವಿ 2007) ದಿ: 26–05–2009
3. ವಿಚಾರಣಾಧಿಕಾರಿಗಳ ವರದಿ ದಿ: 29–10–2009

**ಪ್ರಸ್ತಾವನೆ:**

ಶ್ರೀ ಆರ್. ನಾರಾಯಣ್ ಕೆ.ಎ.ಎಸ್ ಅಧಿಕಾರಿ, ಶ್ರೀ ಕೆ. ನಾರಾಯಣಸ್ವಾಮಿ, ಶ್ರೀ ಎನ್.ಹೆಚ್. ಸದಾಶಿವರಾವ್, ಶ್ರೀ ಮೊಹಿನುದ್ದೀನ್, ಶ್ರೀ ಮಹ್ಮದ್ ಅಲ್ತಾಫ್ ಪಾಷಾ ಶ್ರೀ ಸಿ. ದೇವೇಗೌಡ, ಶ್ರೀ ಕೆ.ಯಲ್ಲಯ್ಯ, ಶ್ರೀ ಚಿಂತಾಮಣಿ ಶ್ರೀ ಡಿ. ಶಿವರಾಮಯ್ಯ ಇವರುಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕು ಕಛೇರಿಯಲ್ಲಿ ಕ್ರಮವಾಗಿ ತಹಸೀಲ್ದಾರ್, ರಾಜಸ್ವ ನಿರೀಕ್ಷಕ, ಗ್ರಾಮ ಲೆಕ್ಕಿಗರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ಸರ್ಕಾರಿ ಜಮೀನುಗಳನ್ನು ಕಾನೂನು ಬಾಹಿರವಾಗಿ ಮಂಜೂರು ಮಾಡಿರುವರೆಂಬ ಆರೋಪದ ಸಂಬಂಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂ: (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗ ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಮಧ್ಯೆ ಶ್ರೀ. ಆರ್ ನಾರಾಯಣ್, ಕೆ.ಎ.ಎಸ್ ಅಧಿಕಾರಿ ರವರು ದಿ: 03–09–2008 ರಂದು ನಿಧನ ಹೊಂದಿದ ಕಾರಣ ಅವರ ವಿರುದ್ಧ ಆರೋಪಗಳ ಕುರಿತು ಇಲಾಖಾ ವಿಚಾರಣೆಯನ್ನು ಕೈ ಬಿಟ್ಟು ಪ್ರಕರಣದಲ್ಲಿನ ಇತರೇ ಆರೋಪಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ಮೇಲೆ ಓದಲಾದ ಕ್ರಮ ಸಂ: 2ರ ಆದೇಶದಲ್ಲಿ ಆದೇಶಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ದಿ: 29–10–2009ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಎನ್.ಎಚ್. ಸದಾಶಿವರಾವ್, ಶ್ರೀ ಮೊಹಿನುದ್ದೀನ್, ಶ್ರೀ ಮಹಮದ್ ಅಲ್ತಾಫ್ ಪಾಷ, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿದೆಯೆಂದು ಹಾಗೂ ಶ್ರೀ ಕೆ. ನಾರಾಯಣಸ್ವಾಮಿ, ಶ್ರೀ ದೇವೇಗೌಡ ಮತ್ತು ಶ್ರೀ ಚಿಂತಾಮಣಿ ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಅಧಿಕಾರಿಗಳಿಗೆ ಎರಡನೇ ಕಾರಣ ಕೇಳುವ ನೋಟೀಸ್ ಮೂಲಕ ಒದಗಿಸಲಾಗಿತ್ತು. ಇದಕ್ಕೆ ಉತ್ತರವಾಗಿ ಶ್ರೀ ಮೊಹಿನುದ್ದೀನ್ ಶ್ರೀ ಮಹಮದ್ ಅಲ್ತಾಫ್ ಪಾಷಾ, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ರವರು ಉತ್ತರ ನೀಡಿ ತಾವುಗಳು ಅರ್ಜಿದಾರರೊಂದಿಗೆ ಷಾಮೀಲಾಗಿ ಭೂ ಮಂಜೂರಾತಿ ಮಾಡಿರುವುದಿಲ್ಲವೆಂದು ಕೇವಲ ಕಡತದಲ್ಲಿ ವಿವರಗಳನ್ನು ನಮೂದಿಸಿ ಸಲ್ಲಿಸಿದ್ದು, ಈ ವಿವರಗಳು ಸರಿಯಾಗಿಲ್ಲದಿದ್ದಲ್ಲಿ ಕಡತವನ್ನು ತಮಗೆ ಹಿಂತಿರುಗಿಸಿ ಮಾಹಿತಿಯನ್ನು ಒದಗಿಸುವಂತೆ ಅಂದಿನ ತಹಸೀಲ್ದಾರ್ ರವರು ಕೋರದೇ, ಇವರುಗಳು ಒದಗಿಸಿದ ಮಾಹಿತಿ ಆಧಾರದ ಮೇಲೆ ಭೂ ಮಂಜೂರು ಮಾಡಿ ಆದೇಶ ಹೊರಡಿಸಿರುವ ಕಾರಣ ಯಾವುದೇ ದುರ್ನಡತೆ ಎಸಗಿರುವುದಿಲ್ಲವೆಂದು ತಿಳಿಸುತ್ತಾ ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸಲು ಕೋರಿದ್ದಾರೆ. ಶ್ರೀ ಎನ್.ಎಚ್. ಸದಾಶಿವರಾವ್, ಹಿಂದಿನ ರಾಜಸ್ವ ನಿರೀಕ್ಷಕರು ಇವರಿಗೆ ವಿಚಾರಣೆ ಪ್ರಾರಂಭವಾಗುವ ಮುನ್ನ ಆರೋಪ ಪಟ್ಟಿಯನ್ನಾಗಲೀ ಅಥವಾ ವಿಚಾರಣ ವರದಿ ಬಂದ ನಂತರ ವಿಚಾರಣ ವರದಿಯನ್ನಾಗಲೀ ಇವರಿಗೆ ಜಾರಿಗೊಂಡಿರುವುದಿಲ್ಲ. ಕಾರಣ ಇವರ ವಿಳಾಸ ಪತ್ತೆಯಾಗದೆ ಹಾಗೂ ಅವರ ಬಗ್ಗೆ ಅಚುಕಿಯು ಸಹ ಪತ್ತೆಯಾಗಿರುವುದಿಲ್ಲ. ಆದುದರಿಂದ ಇವರಿಂದ ಯಾವುದೇ ವಿವರಣೆ ಬಂದಿರುವುದಿಲ್ಲ.

ಇದನ್ನು ಸರ್ಕಾರವು ಪರಿಶೀಲಿಸಿ ಈ ಆರೋಪಿತರು ಜಮೀನಿನ ಮಂಜೂರಾತಿಗಾಗಿ ಕಡತಗಳನ್ನು ತಯಾರಿಸುವಾಗ ಕೆಲವು ಮುಖ್ಯವಾದ ಮಾಹಿತಿಗಳನ್ನು ನಮೂದಿಸಿಲ್ಲದೇ ಇರುವುದರಿಂದ ಅನರ್ಹ ವ್ಯಕ್ತಿಗಳಿಗೂ ಕೂಡ ಜಮೀನು ಮಂಜೂರಾತಿ ಮಾಡಿರಬಹುದೆಂಬ ಅಭಿಪ್ರಾಯದೊಂದಿಗೆ ಈ ಮಂಜೂರಾತಿಗೆ ಸಂಬಂಧಪಟ್ಟಂತೆ ಆರೋಪಗಳು ಮಾಡಲಾಗಿದೆ. ಅಂದರೆ ನೌಕರರು ಕಡತಗಳನ್ನು ತಯಾರಿಸುವಾಗ ಅರ್ಜಿದಾರರು ಈಗಾಗಲೇ ಹೊಂದಿರುವ ಭೂಮಿಗಳ ವಿವರಗಳು, ಅವರು ವ್ಯವಸಾಯಗಾರರೇ ಅಥವಾ ಇಲ್ಲವೇ, ಅವರ ವಾರ್ಷಿಕ ವರಮಾನ ಇತ್ಯಾದಿ ಎಲ್ಲಾ ವಿವರಗಳನ್ನು ಸಿದ್ಧಪಡಿಸಿ ಎಲ್ಲಾ ವಿವರಗಳೊಂದಿಗೆ ಮಂಜೂರಾತಿ ಸಮಿತಿ ಮುಂದೆ ಸಲ್ಲಿಸಬೇಕಾಗುತ್ತದೆ. ಈ ಎಲ್ಲಾ ಮಾಹಿತಿಗಳಿಲ್ಲದೇ ಇದ್ದರೆ ದರಖಾಸ್ತು ಸಲ್ಲಿಸಿರುವ ವ್ಯಕ್ತಿಯು ಜಮೀನನ್ನು ಪಡೆಯಲು ಅರ್ಹರೇ ಅಥವಾ ಇಲ್ಲವೇ ಎಂಬುದನ್ನು ಭೂ ಮಂಜೂರಾತಿ ನಿಯಮಗಳನ್ವಯ ನಿರ್ಧರಿಸಲು ಸ್ಪಷ್ಟವಾದ ಮಾಹಿತಿ ಇರದ ಕಾರಣ ಇವರ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವುದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ವಿಚಾರಣಾಧಿಕಾರಿಗಳ ವರದಿಯಂತೆ ಶ್ರೀ ಕೆ. ನಾರಾಯಣಸ್ವಾಮಿ ಅಂದಿನ ಪ್ರ.ದ.ಸ ಶ್ರೀ ಸಿ. ದೇವೇಗೌಡ, ಅಂದಿನ ಗ್ರಾಮ ಲೆಕ್ಕಿಗರು ಮತ್ತು ಶ್ರೀ ಚಿಂತಾಮಣಿ, ಅಂದಿನ ಗ್ರಾಮ ಲೆಕ್ಕಿಗರು ಇವರ ವಿರುದ್ಧ ಮಾಡಿರುವ ಆಪಾದನೆಗಳನ್ನು ಕೈ ಬಿಟ್ಟು ಅವರನ್ನು ಆರೋಪಗಳಿಂದ ಮುಕ್ತಗೊಳಿಸಲು ತೀರ್ಮಾನಿಸಲಾಗಿದೆ. ಮುಂದುವರೆದು ಆರೋಪಗಳು ರುಜುವಾತಾಗಿರುವ ಆರೋಪಿತರ ಪೈಕಿ ಶ್ರೀ ಎನ್.ಎಚ್. ಸದಾಶಿವರಾವ್ ಇವರ ವಿಳಾಸವು ಪತ್ತೆಯಾಗದೇ ಇರುವುದರಿಂದ ಇವರ ವಿರುದ್ಧ ವಿಧಿಸಬಹುದಾದ ದಂಡನೆಯನ್ನು ಕಾಯ್ದುಕೊಳ್ಳಲು ತೀರ್ಮಾನಿಸಿದೆ. ಉಳಿದಂತೆ ಶ್ರೀ ಮಹಮದ್ ಅಲ್ತಾಫ್ ಪಾಷಾ, ಹಿಂದಿನ ರಾಜಸ್ವ ನಿರೀಕ್ಷಕರು ಹಾಗೂ ಸೇವೆಯಿಂದ ನಿವೃತ್ತಿ ಹೊಂದಿರುವ ಆಪಾದಿತರಾದ ಶ್ರೀ ಮೊಹಿನುದ್ದೀನ್, ಶ್ರೀ ಕೆ.ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರುಗಳಿಗೆ ದಂಡನೆ ವಿಧಿಸಲು ತೀರ್ಮಾನಿಸಿದೆ. ಅದರಂತೆ ಶ್ರೀ ಮೊಹಿಮುದ್ದೀನ್, ಶ್ರೀ ಕೆ. ಯಲ್ಲಯ್ಯ ಹಾಗೂ ಶ್ರೀ ಡಿ. ಶಿವರಾಮಯ್ಯ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಇವರಿಗೆ ದಂಡನೆ ವಿಧಿಸುವ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಪಡೆದು ಮುಂದಿನ ಕ್ರಮ ಕೈಗೊಳ್ಳಲಾಗುವುದು. ಅದರಂತೆ ವಿಚಾರಣಾ ವರದಿಯನ್ನು ಅಂಗೀಕರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಎಸ್ಇಎನ್ 2006 (ಸಿಆಸುಇ 75ಕೆಇವಿ 2007). ಬೆಂಗಳೂರು ದಿನಾಂಕ: 28ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iv-a)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಹಮದ್ ಅಲ್ತಾಫ್ ಪಾಷಾ, ಹಿಂದಿನ ರಾಜಸ್ವ ನಿರೀಕ್ಷಕರು, ಹಾಲಿ ವ್ಯವಸ್ಥಾಪಕರು, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, (ರಾಷ್ಟ್ರೀಯ ಹೆದ್ದಾರಿ) ಬೆಂಗಳೂರು ಇವರು ಪಡೆಯುತ್ತಿರುವ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ 3 ಹಂತಕ್ಕೆ ಒಂದು ವರ್ಷದ ಅವಧಿಗೆ ಕಡಿಮೆಗೊಳಿಸಿ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ. ಒಂದು ವರ್ಷದ ನಂತರ ಇವರ ವೇತನವು ಸಂಚಿತ ಪರಿಣಾಮವಿಲ್ಲದೇ ಪುನರ್‌ಸ್ಥಾಪಿತವಾಗುವುದು.

ಮುಂದುವರೆದು ಶ್ರೀ ಕೆ. ನಾರಾಯಣಸ್ವಾಮಿ, ಅಂದಿನ ಪ್ರ.ದ.ಸ ಶ್ರೀ ಸಿ. ದೇವೇಗೌಡ, ಅಂದಿನ ಗ್ರಾಮ ಲೆಕ್ಕಿಗರು ಮತ್ತು ಶ್ರೀ ಚಿಂತಾಮಣಿ, ಅಂದಿನ ಗ್ರಾಮ ಲೆಕ್ಕಿಗರು ಇವರ ವಿರುದ್ಧ ಮಾಡಿರುವ ಆಪಾದನೆಗಳು ಸಾಬೀತಾಗದ ಕಾರಣ ಇವರುಗಳನ್ನು ಆರೋಪಗಳಿಂದ ಆರೋಪಮುಕ್ತರನ್ನಾಗಿಸಿದೆ. ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

ಪಿ.ಆರ್ 125

## ಕಂದಾಯ ಸಚಿವಾಲಯ

**ವಿಷಯ** : ಶ್ರೀ. ಹೆಚ್. ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಹಾವೇರಿ ತಾಲ್ಲೂಕು ಪ್ರಸ್ತುತ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು ಅಂತಿಮ ಆದೇಶ.

**ಓದಲಾಗಿದೆ** :
1. ಹಾವೇರಿ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಸಿಬ್ಬಂದಿ(1)ವಹಿ-42/2006-07 ದಿನಾಂಕ: 13-4-2007.
2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಸಿಎ/ಸಿಆರ್/61/07-08 ದಿನಾಂಕ: 13-4-2010.

**ಪ್ರಸ್ತಾವನೆ:**

ಶ್ರೀ. ಹೆಚ್.ಪಿ. ನಾಗರಾಜ, ಹಿಂದಿನ ತಹಶೀಲ್ದಾರ್, ಹಾವೇರಿ ಇವರು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಕಳಪೆ ಗುಣಮಟ್ಟದ ಗಣಕಯಂತ್ರಗಳನ್ನು ಖರೀದಿಸಿ, ಅತೀ ಕಡಿಮೆ ದರ ಸೂಚಿಸಿ ಸಲ್ಲಿಸಿದವರಿಗೆ ಗಣಕಯಂತ್ರ ಪೂರೈಸಲು ಆದೇಶ ಕೊಟ್ಟಿರುವುದಿಲ್ಲವೆಂದು ಮತ್ತು ಸರ್ಕಾರಕ್ಕೆ ಈ ರೀತಿ ಆರ್ಥಿಕ ಹಾನಿ ಮಾಡಿರುವುದರಿಂದ ಇವರ ಮೇಲೆ ಶಿಸ್ತಿನ ಕ್ರಮ ಜರುಗಿಸಲು ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ

4 ಗಳನ್ನು ತಹಶೀಲ್ದಾರ್, ಹಾವೇರಿ ಇವರಿಂದ ಪಡೆದು ಸೂಕ್ತ ಶಿಫಾರಸ್ಸಿನೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 13-4-2007ರ ಪತ್ರದಲ್ಲಿ ಸೂಕ್ತ ಶಿಸ್ತಿನ ಕ್ರಮ ಜರುಗಿಸಲು ಹಾವೇರಿ ಜಿಲ್ಲಾಧಿಕಾರಿಗಳು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರದ ದಿನಾಂಕ: 20-9-2007ರ ಪತ್ರದಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 10 ಎಡಿಇ 2006 ದಿನಾಂಕ: 25-1-2007ರಲ್ಲಿ ತಹಶೀಲ್ದಾರ್ ಅಥವಾ ಸರಿ ಸಮಾನವಾದ ಅಧಿಕಾರಿಯವರ ಮೇಲೆ ಇಲಾಖಾ ವಿಚಾರಣೆ ನಡೆಸಿ ಕ.ನಾ.ಸೇ(ವ.ನಿ&ಮೇ) ನಿಯಮಗಳು 1957ರ ನಿಯಮ 8(i) ರಿಂದ 8(iva) ರವರೆಗಿನ ದಂಡನೆ ವಿಧಿಸಲು ಪ್ರಾದೇಶಿಕ ಆಯುಕ್ತರಿಗೆ ಅಧಿಕಾರ ನೀಡಲಾಗಿರುವುದರಿಂದ, ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪ್ರಾದೇಶಿಕ ಆಯುಕ್ತರು, ಬೆಳಗಾಂ ವಿಭಾಗ ರವರಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿತ್ತು. ಶ್ರೀ ಹೆಚ್.ಪಿ. ನಾಗರಾಜುರವರು ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ ತಹಶೀಲ್ದಾರರಾಗಿರುವುದರಿಂದ, ಸದರಿ ಪ್ರಸ್ತಾವನೆಯನ್ನು ಬೆಳಗಾಂ ವಿಭಾಗದ ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರಿಗೆ ದಿನಾಂಕ: 23-10-2007ರಂದು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಬೆಂಗಳೂರು ವಿಭಾಗದ ಪ್ರಾದೇಶಿಕ ಆಯುಕ್ತರ ದಿನಾಂಕ: 13-4-2010ರ ಪತ್ರದಲ್ಲಿ, ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಹಾವೇರಿ ತಾಲ್ಲೂಕು ಇವರು ಹಾವೇರಿ ತಾಲ್ಲೂಕು ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ನಿಯಮಕ್ಕೆ ವಿರುದ್ಧವಾಗಿ ಗಣಕಯಂತ್ರ ಖರೀದಿ ಮತ್ತು ದುರಸ್ತಿಗೆ ಸಂಬಂಧಿಸಿದಂತೆ, ನಿಯಮಬಾಹಿರವಾಗಿ ಕರ್ತವ್ಯ ಲೋಪ ಎಸಗಿರುವ ಬಗ್ಗೆ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ ಬೆಳಗಾವಿ ವಿಭಾಗದ ಪ್ರಾದೇಶಿಕ ಆಯುಕ್ತರಿಂದ ದಿನಾಂಕ:23-10-2007 ರಂದು ಸ್ವೀಕರಿಸಿರುವ ಕಡತವನ್ನು ಪರಿಶೀಲಿಸಿ, ಇಲಾಖಾ ವಿಚಾರಣೆಯ ಕ್ರಮ ಕೈಗೊಳ್ಳಲಾಗಿದ್ದು, ಈ ಬಗ್ಗೆ ಆರೋಪಿತ ಅಧಿಕಾರಿಗಳಿಗೆ ದಿನಾಂಕ: 13-5-2008 ರಂದು ಆರೋಪ ಪಟ್ಟಿ ಅನುಬಂಧ-1 ರಿಂದ 4ರ ತಿಳುವಳಿಕೆಯನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 11ರಡಿ ಜಾರಿಗೊಳಿಸಲಾಗಿರುತ್ತದೆ. ಸದರಿ ಆರೋಪಿತ ನೌಕರರು ದಿನಾಂಕ: 4-6-2008ರಂದು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿದ್ದು, ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಈ ಹಿನ್ನೆಲೆಯಲ್ಲಿ, ಪ್ರಕರಣದಲ್ಲಿ ಮುಂದುವರೆದು ಕಛೇರಿಯ ದಿನಾಂಕ: 24-9-2008ರ ಆದೇಶದಂತೆ ಶ್ರೀ ಕೆ. ಎಸ್. ನಾಗೇಂದ್ರ ಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿ ಸದರಿಯವರು ದಿನಾಂಕ: 19-1-2009 ರಂದು ವಿಚಾರಣಾ ವರದಿ ಸಲ್ಲಿಸುತ್ತಾ ಆರೋಪಗಳು ಸಾಬೀತಾಗಿರುವುದಿಲ್ಲವಾಗಿ ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿ ಕೆಲವೊಂದು ಆಕ್ಷೇಪಣೆಗಳನ್ನು ಹಾಗೂ ಲೋಪದೋಷಗಳನ್ನು ಗುರುತಿಸಿ, ಪ್ರಕರಣದಲ್ಲಿ ಸದರಿ ಅಂಶಗಳ ಬಗ್ಗೆ ಮರುವಿಚಾರಣೆ ನಡೆಸಿ ವರದಿ ಮಾಡಲು ದಿನಾಂಕ: 26-5-2009 ರಂದು ವಿಚಾರಣಾಧಿಕಾರಿಗಳಿಗೆ ಸೂಚಿಸಿ ಪತ್ರ ಬರೆದು ಪ್ರಕರಣವನ್ನು ಹಿಂತಿರುಗಿಸಲಾಗಿರುತ್ತದೆ. ಆನಂತರ ಮರುವಿಚಾರಣೆ ನಡೆಸಿರುವ ವಿಚಾರಣಾಧಿಕಾರಿಗಳು ದಿನಾಂಕ: 11-12-2009 ರಂದು ತಮ್ಮ ವರದಿಯನ್ನು ಸಲ್ಲಿಸಿದ್ದು, ಆರೋಪಿ ಅಧಿಕಾರಿಗಳ ವಿರುದ್ಧದ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ಪಟ್ಟಿರುತ್ತಾರೆ. ಈ ಹಿನ್ನೆಲೆಯಲ್ಲಿ, ಆರೋಪಿ ಅಧಿಕಾರಿಗಳಿಗೆ ವಿಚಾರಣಾ ವರದಿಯೊಂದಿಗೆ ದಿನಾಂಕ: 25-1-2010 ರಂದು 2ನೇ ಕಾರಣ ಕೇಳುವ ನೋಟೀಸನ್ನು ಪ್ರಾದೇಶಿಕ ಆಯುಕ್ತರು ಜಾರಿ ಮಾಡಿರುತ್ತಾರೆ. ಆಪಾದಿತರು ತಮ್ಮ ರಕ್ಷಣಾ ಹೇಳಿಕೆಯನ್ನು ದಿನಾಂಕ: 4-2-2010 ರಂದು ಸಲ್ಲಿಸಿ, ತಮ್ಮ ಮೇಲಿನ ಆರೋಪಗಳು ದುರುದ್ದೇಶ ಪೂರಕವಾಗಿ ಹೂಡಲಾಗಿದೆ ಎಂದು, ತಮ್ಮಿಂದ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲವೆಂದು ಮತ್ತು ಕರ್ತವ್ಯ ಲೋಪ ಎಸಗಿರುವುದಿಲ್ಲವೆಂದು ಪ್ರತಿಪಾದಿಸಿರುತ್ತಾರೆ. ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಹಾವೇರಿ ತಾಲ್ಲೂಕು ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದರಿಂದ, ನಿಯಮಾವಳಿ ಪ್ರಕಾರ ಸೂಕ್ತ ಕ್ರಮ ಜರುಗಿಸುವಂತೆ ಕೋರಿ ಪ್ರಾದೇಶಿಕ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ವಿಚಾರಣಾ ಸಮಯದಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಹೆಚ್. ಕೆ. ನಾಗರಾಜು ಇವರು ತಮ್ಮ ಹೇಳಿಕೆ ಸಲ್ಲಿಸಿ, ಆಡಳಿತಾತ್ಮಕ ಮಂಜೂರಾತಿ ನೀಡಿದ ಸಂಸ್ಥೆಯವರು ಮಾರ್ಚ್ ತಿಂಗಳಲ್ಲಿ ಸರಬರಾಜು ಮಾಡಲು ಸಾಧ್ಯವಿಲ್ಲವೆಂದು ಮೌಖಿಕವಾಗಿ ತಿಳಿಸಿದ ಮೇಲೆ ಅಂದಿನ ಜಿಲ್ಲಾಧಿಕಾರಿಗಳು ಹಾಗೂ ಕೇಂದ್ರ ಸ್ಥಾನಿಕ ಸಹಾಯಕರೊಂದಿಗೆ ಚರ್ಚಿಸಿ, ಅವರಿಂದ ಮೌಖಿಕ ಒಪ್ಪಿಗೆ ಪಡೆದು ಅದೇ ದರದಲ್ಲಿ ಬಿ.ಪಿ.ಎಲ್. ಕಂಪನಿಯಿಂದ ಗಣಕಯಂತ್ರಗಳನ್ನು ಖರೀದಿಸಲಾಗಿದೆ. ಮಾರ್ಚ್ 20ರೊಳಗಾಗಿ ಖರೀದಿಸದೇ ಇದ್ದಲ್ಲಿ ಬಿಡುಗಡೆಯಾದ ಹಣ ಲ್ಯಾಪ್ಸ್ ಆಗುತ್ತಿದ್ದರಿಂದ, ಕಛೇರಿಗೆ ಗಣಕಯಂತ್ರಗಳು ಅವಶ್ಯಕತೆ ಇರುವುದರಿಂದ ಸದುದ್ದೇಶದಿಂದ ಸರ್ಕಾರದ ಹಣ ಲ್ಯಾಪ್ಸ್ ಮಾಡದೇ ಸರಬರಾಜುದಾರರಿಗೆ ಕ್ರಾಸ್ ಚೆಕ್ ಮೂಲಕ ಹಣ ಪಾವತಿಸಿ, ಗಣಕ ಯಂತ್ರಗಳನ್ನು ಖರೀದಿಸಲಾಗಿದೆ. ಆಪಾದಿತರ ಹೇಳಿಕೆಯನ್ನು ವಿಚಾರಣಾ ಅಧಿಕಾರಿಗಳು ಪರಿಶೀಲಿಸಿದ್ದು, ಆಪಾದಿತ ದಿನಾಂಕ: 9-3-2005 ರಂದು ಹಾವೇರಿ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರದಲ್ಲಿ ಮೇಲೆ ಹೇಳಿರುವ ಸಂಗತಿಗಳು ಕಂಡು ಬಂದಿರುವುದಿಲ್ಲ. ಈ ರೀತಿ ಖರೀದಿಗೆ ಮೌಖಿಕ ಅನುಮತಿ ಪಡೆದು ಗಣಕಯಂತ್ರಗಳನ್ನು ಖರೀದಿಸಿದ್ದಾರೆಂದು ತಿಳಿದು ಬಂದಿಲ್ಲ. ಇದರಿಂದ ಜಿಲ್ಲಾಧಿಕಾರಿಗಳಿಂದ ಗಣಕಯಂತ್ರ ಖರೀದಿಸಲು ಮೌಖಿಕವಾಗಿ ಅನುಮತಿ ಪಡೆದಿರುವುದಾಗಿ ಹೇಳುವುದನ್ನು ಒಪ್ಪಲಾಗುವುದಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ. ಆಪಾದಿತರ ಉದ್ದೇಶವು ಸದುದ್ದೇಶದಿಂದ ಕೂಡಿದ್ದರೂ ಸಹ ಅವರೇ ಗಣಕಯಂತ್ರಗಳನ್ನು ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ನ್ನು ಉಲ್ಲಂಘಿಸಿರುತ್ತಾರೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ.

ಕಳಪೆ ಗುಣಮಟ್ಟದ ಗಣಕಯಂತ್ರ ಖರೀದಿಸಿರುವ ಬಗ್ಗೆ ಗಣಕಯಂತ್ರಗಳನ್ನು ಖರೀದಿ ಮಾಡಿ ಸ್ವಾಧೀನಕ್ಕೆ ತೆಗೆದುಕೊಂಡ ನಂತರ ಅದು ಸರಿಯಾಗಿ ಕೆಲಸ ಮಾಡುತ್ತಿದೆ ಎಂದು ಕಂಡುಬರುತ್ತದೆ ಎಂಬುದನ್ನು ಸಾಕ್ಷಿಗಳು ತಮ್ಮ ಹೇಳಿಕೆಯಲ್ಲಿ ತಿಳಿಸಿರುತ್ತಾರೆಂದು ಹೇಳಿರುತ್ತಾರೆ. ಗಣಕಯಂತ್ರ ಹಾಗೂ ಇತರೆ ಉಪಕರಣಗಳು ಖರೀದಿಸಿದ ಮೂರು ತಿಂಗಳಲ್ಲೇ ರಿಪೇರಿಗೆ ಬಂದಿದ್ದು, ಅವುಗಳನ್ನು ರಿಪೇರಿಗಾಗಿ ತೆಗೆದುಕೊಂಡು ಹೋಗಿ, ಅವುಗಳನ್ನು ರಿಪೇರಿ ಮಾಡಿಸಿ ಕಛೇರಿಗೆ ಹಿಂದಿರುಗಿಸಲಿಲ್ಲವೆಂದು ಸಹ ವಿಚಾರಣಾ ಸಮಯದಲ್ಲಿ ತಿಳಿದು ಬಂದಿದೆ. ಸದರಿ ಕಂಪನಿಯ ಬಗ್ಗೆ ಅಕ್ಕಪಕ್ಕದವರನ್ನು ವಿಚಾರಿಸಿದಾಗ, ಕಂಪನಿಯು ಈ ಹಿಂದೆ ಮೇಲಿನ ವಿಳಾಸದಲ್ಲಿ ಇದ್ದು, ಈಗ ಖಾಲಿ ಮಾಡಿಕೊಂಡು ಹೋಗಿರುತ್ತಾರೆಂದು ತಿಳಿಸಿರುತ್ತಾರೆಂದು ಪೊಲೀಸರು ಹೇಳಿದ್ದಾರೆ. ಸದರಿ ಉಪಕರಣಗಳು ವಾಪಸ್ಸು ಬಂದಿರುವ ಬಗ್ಗೆ ಯಾವುದೇ ಮಾಹಿತಿ ಲಭ್ಯವಾಗಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಆಪಾದಿತರ ವಿರುದ್ಧ ಪಾರದರ್ಶಕತೆ ನಿಯಮ ಉಲ್ಲಂಘಿಸಿ, 93 ಸಾವಿರ ರೂಪಾಯಿಗಳ ಗಣಕಯಂತ್ರ ಹಾಗೂ ಇದಕ್ಕೆ ಸಂಬಂಧಿಸಿದ ಇತರೆ ಉಪಕರಣಗಳನ್ನು ಖರೀದಿಸಿರುವುದು ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ವಿಚಾರಣೆಯಲ್ಲಿ ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಹಾವೇರಿ ತಾಲ್ಲೂಕು ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದರಿಂದ, ಸಿಸಿಎ ನಿಯಮ-8

ಅಡಿಯಲ್ಲಿ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಿಲ್ಲದಂತೆ (without cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 20 ಎಡಿಎ 2007 ಬೆಂಗಳೂರು ದಿನಾಂಕ: 16–12–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಹಾವೇರಿ ತಾಲ್ಲೂಕು ಪ್ರಸ್ತುತ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವ ಕಾರಣ, ಕರ್ನಾಟಕ ನಾಗರೀಕ ಸೇವಾ (ವ.ನಿ.& ಮೇ) ನಿಯಮಗಳು 1957ರ ನಿಯಮ 8 (iii) ರನ್ವಯ ಸದರಿಯವರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಿಲ್ಲದಂತೆ (without cumulative effect) ತಡೆಹಿಡಿಯುವ ದಂಡನೆ ವಿಧಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್ 126

## ಕಂದಾಯ ಸಚಿವಾಲಯ

**ವಿಷಯ** : ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಭದ್ರಾಪುರ ಹಾಗೂ ಗೂಳ್ಯ ಗ್ರಾಮಗಳಲ್ಲಿರುವ ಶ್ರೀ ಬಸವಣ್ಣ ದೇವರು ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸುವ ಬಗ್ಗೆ.

**ಓದಲಾಗಿದೆ** : ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 40/2009–10 ದಿನಾಂಕ: 23.09.2010

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 23.09.2010 ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಭದ್ರಾಪುರ ಗ್ರಾಮದ ಶ್ರೀ ಬಸವಣ್ಣ ದೇವರು ಹಾಗೂ ಗೂಳ್ಯ ಗ್ರಾಮದ ಶ್ರೀ ಬಸವಣ್ಣ ದೇವರು ದೇವಾಲಯಗಳಿಗೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಆದೇಶ ಸಂಖ್ಯೆ: ಎಡಿಎಂ 2 ಐಎನ್ಎ ಸಿಆರ್ 21/2003–04 ದಿನಾಂಕ: 19.05.2010 ರಲ್ಲಿ 2006–07 ನೇ ಸಾಲಿನಿಂದ ಜಾರಿಗೆ ಬರುವಂತೆ ತಸ್ತೀಕ್ ಮೊತ್ತವನ್ನು ರೂ. 6,000/– ಕ್ಕೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

ಸಹಾಯಕ ಆಯುಕ್ತರು, ಹಿಂದೂ ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರು ಕರ್ನಾಟಕ ರಾಜ್ಯ ಪತ್ರದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಅಧಿಸೂಚಿತ ಸಂಸ್ಥೆಗಳ ಪಟ್ಟಿಯನ್ನು ಪ್ರಕಟಿಸಿರುವ ಸಂದರ್ಭದಲ್ಲಿ ಎರಡು ದೇವಸ್ಥಾನಗಳ ಹೆಸರುಗಳು ಬಿಟ್ಟುಹೋಗಿರುವುದರಿಂದ ಅವುಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸುವಂತೆ ಕೋರಿರುತ್ತಾರೆ.

ಸಹಾಯಕ ಆಯುಕ್ತರು, ಬೆಂಗಳೂರು ಗ್ರಾಮಾಂತರ ಜಿಲ್ಲೆರವರ ಕೋರಿಕೆಯಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕಿನ ಭದ್ರಾಪುರ ಗ್ರಾಮ, ಶ್ರೀ ಬಸವಣ್ಣ ದೇವರು ಹಾಗೂ ಗೂಳ್ಯ ಗ್ರಾಮ ಶ್ರೀ ಬಸವಣ್ಣ ದೇವರು ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಈ 99 ಮುಆಬಿ 2010, ಬೆಂಗಳೂರು, ದಿನಾಂಕ: 21.12.2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು, ಭದ್ರಾಪುರ ಗ್ರಾಮದ ಶ್ರೀ ಬಸವಣ್ಣ ದೇವರು ಹಾಗೂ ಗೂಳ್ಯ ಗ್ರಾಮದ ಶ್ರೀ ಬಸವಣ್ಣ ದೇವರು ದೇವಸ್ಥಾನಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23(ಎ)(ಬಿ) ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ(ಮುಜರಾಯಿ)

ಪಿ.ಆರ್ 127

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಇವರ ವಿರುದ್ಧ ಲೋಕಾಯುಕ್ತ ದಾಳಿ ಕುರಿತು.

**ಓದಲಾಗಿದೆ** :

1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 08 ಎಡಿಇ 2009, ದಿನಾಂಕ: 27–05–2009 ಮತ್ತು 03–04–2010.
2) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 8 ಎಎಸ್‌ಡಿ 2009, ದಿನಾಂಕ: 16–02–2010.
3) ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 8 ಎಎಸ್ ಡಿ 2009, ದಿನಾಂಕ: 03–04–2010.

**ಪ್ರಸ್ತಾವನೆ:**

ಶ್ರೀ ಕೇಶವರಾಜು, ತಹಶೀಲ್ದಾರ್, ಬಿ.ಬಿ.ಎಂ.ಪಿ, ಇವರು ಈ ಹಿಂದೆ ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇಲ್ಲಿ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸಿದ್ದ ಸಮಯದಲ್ಲಿ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಅನಧಿಕೃತ ಮರಳು ಸಾಗಾಣಿಕೆಗೆ ಸಂಬಂಧಿಸಿದ ಅಕ್ರಮ ಕುರಿತು ಲೋಕಾಯುಕ್ತ ಪೊಲೀಸ್

ದಾಳಿಗೆ ಸಿಲುಕಿದ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿ ದಿನಾಂಕ: 27-05-2009 ರ ಸರ್ಕಾರದ ಆದೇಶದನ್ವಯ ಇವರನ್ನು ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ: 16-02-2010ರಲ್ಲಿ ಭ್ರಷ್ಟಾಚಾರ ನಿವಾರಣಾ ಅಧಿನಿಯಮದ ಅಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸರ್ಕಾರವು ಅನುಮತಿ ನೀಡಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ದಿನಾಂಕ: 03-04-2010ರ ಆದೇಶದಲ್ಲಿ ಇವರ ಅಮಾನತ್ತನ್ನು ತೆರವುಗೊಳಿಸಿ, ಪುನಃ ಸರ್ಕಾರದ ಸೇವೆಗೆ ನೇಮಿಸಲಾಗಿದೆ.

ಈ ನಡುವೆ ಸದರಿಯವರ ಅಮಾನತ್ತಿನ ಅವಧಿಯು 6 ತಿಂಗಳಿಗಿಂತ ಹೆಚ್ಚಾಗಿರುತ್ತದೆ. ಅಂದರೆ ದಿನಾಂಕ: 27-05-2009 ರಿಂದ 26-11-2009 ಕ್ಕೆ 6 ತಿಂಗಳು ಅವಧಿ ಪೂರ್ಣಗೊಂಡಿರುತ್ತದೆ. ಆದ್ದರಿಂದ ನಂತರದ ಅವಧಿಗೆ ಅಂದರೆ 27-11-2009 ರಿಂದ 03-04-2010 ಅವಧಿಗೆ ಕೆ.ಸಿ.ಎಸ್.ಆರ್ ನಿಯಮ 98(1) ರನ್ವಯ ಜೀವನಾಧಾರ ಭತ್ಯೆಯನ್ನು ಶೇಕಡಾ 75 ರಷ್ಟು ಹೆಚ್ಚಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ.08 ಎಡಿಇ 2009, ದಿನಾಂಕ: 16-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೇಶವರಾಜು, ತಹಶೀಲ್ದಾರರು, ಬಿ.ಬಿ.ಎಂ.ಪಿ, ಬೆಂಗಳೂರು, ಇವರಿಗೆ ದಿನಾಂಕ: 27-11-2010ರಿಂದ 03-04-2010 ರ ಅಮಾನತ್ತಿನ ಅವಧಿಗೆ ಕೆ.ಸಿ.ಎಸ್.ಆರ್ ನಿಯಮ 98(1) ರನ್ವಯ ಜೀವನಾಧಾರ ಭತ್ಯೆಯನ್ನು ಶೇಕಡಾ 75 ರಷ್ಟನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಸಸಾಲಟ್ಟಿ**

ಪಿ.ಆರ್ 128

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಸೇವೆಗಳು-3)

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರ್, ಚಿತ್ತಾಪುರ, ಇವರ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ** : 1) ಜಿಲ್ಲಾಧ್ಯಕ್ಷರು ಹಾಗೂ ಜಿಲ್ಲಾ ಪ್ರಧಾನ ಕಾರ್ಯದರ್ಶಿಗಳು, ಭಾರತೀಯ ಜನತಾ ಪಾರ್ಟಿ, ಗುಲ್ಬರ್ಗಾ (ಗ್ರಾಮಾಂತರ) ಇವರ ಪತ್ರ ದಿನಾಂಕ: 27-07-2009.

2) ಜಿಲ್ಲಾಧಿಕಾರಿಗಳು ಗುಲ್ಬರ್ಗಾ, ಇವರ ಪತ್ರ ಸಂಖ್ಯೆ: ಚುನಾವಣೆ/ ಸಾಮಾನ್ಯ/62/2009-10, ದಿನಾಂಕ: 09-03-2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1) ರ ದಿನಾಂಕ: 27-07-2009 ರ ಪತ್ರದಲ್ಲಿ ಶ್ರೀ ಅಮರನಾಥ ಪಾಟೀಲ್, ಜಿಲ್ಲಾಧ್ಯಕ್ಷರು ಭಾರತೀಯ ಜನತಾ ಪಾರ್ಟಿ, ಗುಲ್ಬರ್ಗಾ, ಇವರು ಚಿತ್ತಾಪುರ ತಾಲ್ಲೂಕು, ತಹಶೀಲ್ದಾರ್ ಶ್ರೀ ಮಧುಕೇಶ್ವರ ಇವರು ಸುಳ್ಳು ಮಾಹಿತಿಯೊಳಗೊಂಡ ಜಾತಿ ಪ್ರಮಾಣ ಪತ್ರ ನೀಡಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಚುನಾವಣಾ ಆಯೋಗವನ್ನು ಕೋರಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ, ಇವರು ದಿನಾಂಕ: 09-03-2010 ರ ಪತ್ರದಲ್ಲಿ ಶ್ರೀ ಎಸ್.ಎಸ್. ಮಧುಕೇಶ್ವರ, ಹಿಂದಿನ ತಹಶೀಲ್ದಾರ್, ಚಿತ್ತಾಪುರ, ಇವರಿಗೆ ಅವರ ವಿರುದ್ಧ ಏಕೆ ಶಿಸ್ತಿನ ಕ್ರಮ ತೆಗೆದುಕೊಳ್ಳಬಾರದೆಂದು ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸಿಗೆ ದಿನಾಂಕ: 28-07-2009 ರ ಉತ್ತರಗಳನ್ನೊಳಗೊಂಡ ವರದಿಯನ್ನು ತಹಶೀಲ್ದಾರ, ಚಿತ್ತಾಪುರ, ಇವರು ಸಲ್ಲಿಸಿದ್ದಾರೆ. ತಹಶೀಲ್ದಾರ್, ಚಿತ್ತಾಪುರ ಇವರ ದಿನಾಂಕ: 28-07-2009 ರಂದು ಉತ್ತರಗಳುಳ್ಳ ವರದಿಯನ್ನು ಮುಖ್ಯ ಚುನಾವಣಾಧಿಕಾರಿಗಳು ಕರ್ನಾಟಕ, ಬೆಂಗಳೂರು, ಇವರಿಗೆ ಕಳುಹಿಸಲಾಗಿರುತ್ತದೆಂದು ತಿಳಿಸುತ್ತಾ, ಸರ್ಕಾರದ ಮಾಹಿತಿಗಾಗಿ ವರದಿ ಸಲ್ಲಿಸಿರುತ್ತಾರೆ.

ಶ್ರೀ ಅಮರನಾಥ ಪಾಟೀಲ್, ಜಿಲ್ಲಾಧ್ಯಕ್ಷರು, ಭಾರತೀಯ ಜನತಾಪಾರ್ಟಿ, ಇವರು ಹಿಂದಿನ ಚಿತ್ತಾಪುರ ತಾಲ್ಲೂಕು ತಹಶೀಲ್ದಾರ್ ಶ್ರೀ ಎಸ್.ಎಸ್. ಮಧುಕೇಶ್ವರ, ಇವರ ವಿರುದ್ಧ ಸುಳ್ಳು ಮಾಹಿತಿಯೊಳಗೊಂಡ ಜಾತಿ ಪ್ರಮಾಣ ಪತ್ರ ನೀಡಿರುವ ಬಗ್ಗೆ ಶಿಸ್ತು ಕ್ರಮ ಕೈಗೊಳ್ಳುವಂತೆ ಚುನಾವಣಾ ಆಯೋಗವನ್ನು ಕೋರಿದ್ದು, ಈ ಬಗ್ಗೆ ಜಿಲ್ಲಾಧಿಕಾರಿಗಳಿಂದ ವರದಿ ಪಡೆದಿದ್ದು, ಶ್ರೀ ವಾಲ್ಮೀಕ ಎಂಬುವವರು ಜಾತಿ ಪ್ರಮಾಣ ಪತ್ರ ನೀಡಲು ತಾಲ್ಲೂಕು ಕಛೇರಿಗೆ ಅರ್ಜಿ ಸಲ್ಲಿಸಿದ್ದರು. ಅವರಿಗೆ ಜಾತಿ ಪ್ರಮಾಣ ಪತ್ರವನ್ನು ತಯಾರಿಸಿದ ವಿಷಯ ನಿರ್ವಾಹಕರು ಅರ್ಜಿದಾರರ ಹೆಸರಿನ ಕಾಲಂನಲ್ಲಿ ಅವರ ತಂದೆಯ ಹೆಸರನ್ನು ಜಾತಿ ಕಾಲಂನಲ್ಲಿ ಅರ್ಜಿದಾರರ ಹೆಸರನ್ನು ಬರೆದು ಮಂಡಿಸಿದಂತೆ ಜಾತಿ ಪ್ರಮಾಣ ಪತ್ರವನ್ನು ನೀಡಿರುತ್ತಾರೆ. ಈ ಜಾತಿ ಪ್ರಮಾಣ ಪತ್ರ ತಪ್ಪಾಗಿದೆಯೆಂದು ಅರ್ಜಿದಾರರು ಇನ್ನೊಂದು ಜಾತಿ ಪ್ರಮಾಣ ಪತ್ರವನ್ನು ನೀಡಲು ಕೋರಿದ ಮೇರೆಗೆ ಹಿಂದೆ ತಪ್ಪಾಗಿ ನೀಡಿದ ಜಾತಿ ಪ್ರಮಾಣ ಪತ್ರ ನೀಡಿರುತ್ತೇನೆಂದು, ಇದು ವಿಷಯ ನಿರ್ವಾಹಕರ ಬೇಜವಾಬ್ದಾರಿತನದಿಂದ ತಪ್ಪಾಗಿದ್ದು, ದುರುದ್ದೇಶದಿಂದ ಮಾಡಿಲ್ಲವೆಂದು ತಹಶೀಲ್ದಾರರು ಹೇಳಿಕೆ ಸಲ್ಲಿಸಿ, ಪ್ರಕರಣ ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ. ಈ ವರದಿಯನ್ನು ಮುಖ್ಯ ಚುನಾವಣಾ ಅಧಿಕಾರಿ, ಬೆಂಗಳೂರು, ಇವರಿಗೆ ದಿನಾಂಕ: 28-07-2009 ರಂದು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ, ಇವರು ಕಳುಹಿಸಿರುತ್ತಾರೆ. ಜಿಲ್ಲಾಧಿಕಾರಿಗಳಾಗಲೀ ಅಥವಾ ಚುನಾವಣಾಧಿಕಾರಿಯಾಗಲೀ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿರುವುದಿಲ್ಲ. ಜಾತಿ ಪ್ರಮಾಣ ಪತ್ರ ನೀಡುವಲ್ಲಿ ತಪ್ಪಾಗಿರುವುದನ್ನು ಸರಿಪಡಿಸಿ, ಸರಿಯಾದ ಜಾತಿ ಪ್ರಮಾಣ ಪತ್ರ ನೀಡಿರುವುದರಿಂದ, ಇನ್ನು ಮುಂದೆ ಈ ರೀತಿ ತಪ್ಪುಗಳಾಗದಂತೆ ಶ್ರೀ ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರರು, ಚಿತ್ತಾಪುರ, ಇವರಿಗೆ ಎಚ್ಚರಿಕೆ ನೀಡಿ, ಪ್ರಕರಣವನ್ನು ಮುಕ್ತಾಯ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 18 ಎಡಿಇ 2009, ದಿನಾಂಕ: 16-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರರು, ಚಿತ್ತಾಪುರ, ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ವಿಚಾರಣೆಯನ್ನು ಕೈಬಿಟ್ಟು, ಪ್ರಕರಣವನ್ನು ಮುಕ್ತಾಯಗೊಳಿಸಿದೆ. ಹಾಗೂ ಸದರಿ ಅಧಿಕಾರಿಯವರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಸಸಾಲಟ್ಟಿ**

ಪಿ.ಆರ್ 129

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಸೇವೆಗಳು-3)

**ಕಂದಾಯ ಸಚಿವಾಲಯ**

**ವಿಷಯ** : ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರಿಗೆ ತಹಶೀಲ್ದಾರ್ ಗುಂಪು-ಬಿ ವೃಂದಕ್ಕೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ** :
1) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಅವರ ಪತ್ರ ಸಂ: ಇಎಸ್‌ಟಿ (1); ಸಿಆರ್: 64/2007-08, ದಿನಾಂಕ: 13-12-2007.
2) ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರ ಮನವಿ ದಿನಾಂಕ: 22-12-2008.
3) ಕೆ.ಪಿ.ಎಸ್.ಸಿ ಪತ್ರ ಸಂ: ಪಿಎಸ್‌ಸಿ 32 ಸಿಎನ್‌ಎಸ್ 09, ದಿನಾಂಕ: 20-03-2010.
4) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 119 ಎಎಸ್‌ಡಿ 2009, ದಿನಾಂಕ: 29-05-2010.
5) ಮಹಾಲೇಖಪಾಲರ ಪತ್ರ ಸಂಖ್ಯೆ: ಉಇ ಖ/ಖ4/10-11-425 ದಿನಾಂಕ: 06-07-2010.

**ಪ್ರಸ್ತಾವನೆ:**

ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್, ಇವರು ಶಿರಸ್ತೇದಾರ್ ಜೇಷ್ಠತಾ ಪಟ್ಟಿಯಲ್ಲಿ ಅವರ ಜನ್ಮ ದಿನಾಂಕ: 10-01-1950ರ ಬದಲಾಗಿ 01-01-1950 ಎಂದು ತಪ್ಪಾಗಿ ನಮೂದಿಸಿದುದರಿಂದ, ಸದರಿ ನೌಕರರು ವಯೋ ನಿವೃತ್ತಿ ಹೊಂದಿರುವುದಾಗಿ ತಪ್ಪಾಗಿ ಅರ್ಥೈಸಿ, ಅವರ ಹೆಸರನ್ನು ಬಿಟ್ಟು ಅವರಿಗಿಂತ ಕಿರಿಯವರಿಗೆ ಸರ್ಕಾರದ ಅಧಿಸೂಚನೆ ಸಂ: ಕಂಇ 329 ಎಎಸ್‌ಡಿ 2007, ದಿನಾಂಕ: 28-01-2008 ರಲ್ಲಿ ಒಟ್ಟು 92 ಜನ ಗ್ರೇಡ್-2 ತಹಶೀಲ್ದಾರರಿಗೆ ಪದೋನ್ನತಿ ನೀಡಲಾಗಿದೆಯೆಂದು ಸದರಿಯವರು ದಿನಾಂಕ: 28-01-2008ರಂದು ಸೇವೆಯಲ್ಲಿದ್ದು ದಿನಾಂಕ: 31-01-2008 ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಅವರ ಕಿರಿಯರಿಗೆ ಪದೋನ್ನತಿ ನೀಡಿದಂತೆ ಇವರಿಗೂ ಗ್ರೇಡ್-2 ತಹಶೀಲ್ದಾರ್ ವೃಂದದಲ್ಲಿ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಲು ಮೇಲೆ (1) ರಲ್ಲಿ ಓದಲಾದ ದಿನಾಂಕ: 13-12-2007ರ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ಪತ್ರದಲ್ಲಿ ಹಾಗೂ ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ: 22-12-2008 ರ ಮನವಿಯಲ್ಲಿ ಕೋರಿರುತ್ತಾರೆ.

ನೌಕರರ ಸೇವಾ ಪುಸ್ತಕ ಹಾಗೂ ಅವರಿಗೆ ನಿವೃತ್ತಿ ಹೊಂದಲು ನೀಡಿದ ದಿನಾಂಕ: 01-01-2008ರ ಅನುಮತಿ ಆದೇಶವನ್ನು ಪರಿಶೀಲಿಸಲಾಗಿ ಸದರಿ ನೌಕರರು ದಿ: 31-01-2008 ರಂದು ನಿವೃತ್ತಿ ಹೊಂದಿರುತ್ತಾರೆ. ಸರ್ಕಾರದ ಅಧಿಸೂಚನೆ ಸಂ: ಆರ್‌ಡಿ 496 ಬಿಎಂಎಂ 2006, ದಿನಾಂಕ: 24-08-2006 ರಂದು ಅಂತಿಮವಾಗಿ ಪ್ರಕಟಿಸಿದ ಶಿರಸ್ತೇದಾರ್/ಉಪ ತಹಶಿಲ್ದಾರರುಗಳ ಜೇಷ್ಠತಾ ಪಟ್ಟಿಯನ್ನು ಪರಿಶೀಲಿಸಲಾಗಿ ಇವರ ಜೇಷ್ಠತಾ ಪಟ್ಟಿಯಲ್ಲಿಯ ಕ್ರ.ಸಂ: 3907 ಇದ್ದು, ಅವರಿಗಿಂತ ಕಿರಿಯರಾದ ಶ್ರೀ ಎ.ಎನ್.ಬಶೀರ್ ಅಹ್ಮದ್ ಇವರ ಕ್ರ.ಸಂ: 3908 ಇರುತ್ತದೆ.

ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್ ಇವರು ಮುಂಬಡ್ತಿ ಹೊಂದಲು ಅರ್ಹರಾಗಿರುತ್ತಾರೆಂದು ತೀರ್ಮಾನಿಸಿ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎ.ಎನ್. ಬಶೀರ್ ಅಹ್ಮದ್, ಇವರಿಗೆ ದಿನಾಂಕ: 28-01-2008ರಲ್ಲಿ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೂಪ್-ಬಿ ವೃಂದಕ್ಕೆ ನೀಡಿದ್ದರಿಂದ ಶ್ರೀ ಬಿ. ಸತ್ಯನಾರಾಯಣರಾವ್ ಇವರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2(1) ರನ್ವಯ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಲು ನಿರ್ಧರಿಸಿ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು, ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 29-05-2010 ರಲ್ಲಿ ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್, ಇವರಿಗೆ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಎ.ಎನ್. ಬಶೀರ್ ಅಹ್ಮದ್ ಇವರಿಗೆ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೇಡ್-2 ವೃಂದಕ್ಕೆ ಮುಂಬಡ್ತಿ ನೀಡಿದ ದಿನಾಂಕ: 28-01-2008ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2(1) ರನ್ವಯ ತಹಶೀಲ್ದಾರ್ ಗ್ರೇಡ್-2 ಹುದ್ದೆಗೆ ವೇತನ ಶ್ರೇಣಿ ರೂ.11,400-21,600 ರಲ್ಲಿ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಿ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ(5) ರಲ್ಲಿ ಓದಲಾದ ದಿನಾಂಕ: 06-07-2010ರ ಪತ್ರದಲ್ಲಿ ಮಹಾಲೇಖಪಾಲರು, ಬೆಂಗಳೂರು, ಇವರು ಶ್ರೀ ಬಿ. ಸತ್ಯನಾರಾಯಣರಾವ್, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎ.ಎನ್. ಬಶೀರ್ ಅಹ್ಮದ್ ರವರು ತಹಶೀಲ್ದಾರ್ ಗ್ರೇಡ್-2 ಹುದ್ದೆಯಲ್ಲಿ ದಿನಾಂಕ: 04-02-2008 ರಂದು ವರದಿ ಮಾಡಿಕೊಂಡಿದ್ದಾರೆ. ಆದರೆ ಶ್ರೀ ಬಿ. ಸತ್ಯನಾರಾಯಣರಾವ್, ಇವರು ದಿನಾಂಕ: 31-01-2008 ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಆದುದುರಿಂದ ಶ್ರೀ ಬಿ. ಸತ್ಯನಾರಾಯಣರಾವ್, ಇವರ ಪದೋನ್ನತಿ ಆದೇಶವನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ.

ಮೇಲಿನ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಮರುಪರಿಶೀಲಿಸಲಾಗಿ, ಶ್ರೀ ಬಿ. ಸತ್ಯನಾರಾಯಣರಾವ್, ಇವರು ದಿನಾಂಕ: 28-01-2008 ರಂದು ಸೇವೆಯಲ್ಲಿದ್ದು, ದಿನಾಂಕ: 31-01-2008 ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಆದುದರಿಂದ ಜೇಷ್ಠತಾ ಪಟ್ಟಿಯಲ್ಲಿ ಜನ್ಮ ದಿನಾಂಕ ವ್ಯತ್ಯಾಸವಾದ್ದರಿಂದ ಇವರ ಹೆಸರನ್ನು ಪದೋನ್ನತಿಯಿಂದ ಕೈಬಿಡಲಾಗಿತ್ತು. ಈ ಕಾರಣದಿಂದ ಇವರ ಪೂರ್ವಾನ್ವಯ ಮುಂಬಡ್ತಿಯನ್ನು ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2 (1)(ಸಿ) ಅಡಿಯಲ್ಲಿ ತಿದ್ದುಪಡಿ ಮಾಡಿ ಪರಿಷ್ಕೃತ ಆದೇಶವನ್ನು ಹೊರಡಿಸಬೇಕಾಗುತ್ತದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 517 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 16-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ. ಸತ್ಯನಾರಾಯಣರಾವ್, ನಿವೃತ್ತ ಶಿರಸ್ತೇದಾರ್, ದಿನಾಂಕ: 28-01-2008 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2 (1)(ಸಿ) ಅಡಿಯಲ್ಲಿ ಪೂವಾನ್ವಯವಾಗಿ ತಹಶೀಲ್ದಾರ್ ಗ್ರೇಡ್-2 ಹುದ್ದೆಗೆ ಮುಂಬಡ್ತಿ ನೀಡಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಸಸಾಲಟ್ಟಿ**

ಪಿ.ಆರ್ 130

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಸೇವೆಗಳು-3)

## ENERGY SECRETARIAT

**Sub:** Enhancement of wind power capacity from 19.00 MW to 31.5 MW in favour of M/s Suzlon Energy Limited-reg.

**Read :**
1. Government Order No. EN 98 NCE 2000 dated: 10-07-2000.
2. Letter No. KRED/08/SEL-Chikkodi (19MW to 31.5 MW/2010/3359 dated 9/13-12-2010 received from the Managing Director, Karnataka Renewable Energy Development Limited, Bangalore.

**Preamble :**

In the Government Order read at (1) above, sanction has been accorded for implementation of 175 MW capacity Wind Power Project at Belgaum and Bellary, Hassan and chitradurga Districts in favour of M/s Suzlon Energy Limited.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 19.00 MW (part capacity of 175 MW) to 31.5 MW at Chikkodi village in Belgaum District in favour of M/s Suzlon Energy Limited.

The proposal has been examined in detail and issued following Orders:-

**Government Order No: EN 484 NCE 2010, Bangalore, Dated 28th December 2010.**

Government accords approval for enhancement of wind power capacity from 19.00 MW (part capacity of 175 MW) to 31.5 MW at Chikkodi village in Belgaum District in favour of M/s Suzlon Energy Limited as detailed below and time limit of the project is extended upto 25-06-2011:-

| Geographical Area details | Sanctioned capacity in MW | Enhancement proposed in stage-I | No. of WTGs & rating in kw | Total capacity including proposed enhancement in MW |
|---|---|---|---|---|
| The area proposed comprises of 4 independent hillocks two are located on the N-E of Chikkodi and South-East of Hirekundi and other two ridge are situated on the East and South-West of Chikkodi all these ridges appears to be non-forest and are open scrub type. The elevations of this ridge are 770, 771, 764, 769 and these ridge are covered in the following geographical co-ordinates:-<br>Ridge A & B:<br>Latitude: $16^0$26'23''-$16^0$28'19''N<br>Longitude: $74^0$32'58''-$74^0$34'30''E<br>Ridge C:<br>Latitude: $16^0$25'41''-$16^o$26'13''N<br>Longitude: $74^0$35'54''-$74^0$35'23''E<br>Ridge D:<br>Latitude: $16^0$24'20''-$16^0$25'16''N<br>Longitude: $74^o$34'30''-$74^o$34'50''E<br>Toposheet No : 47L/11 | 19.00 MW | 12.5 MW | 15 x 2100 kw | 31.50 MW |

The Government has reserved the right to Cancel/modify this Order.

The other terms and conditions of the allotment Order read at (1) above shall continue as it is.

By Order and in the name of the Governor of Karnataka,
**SURESH B. KRISHNAPPANAVAR**
Under Secretary to Government
Energy Department

P.R. 136

## ENERGY SECRETARIAT

**Sub:** Transfer of 1.5 MW wind power capacity in favour of M/s Avon Cycles Limited-reg.

**Read :**
1. Government Order No. EN 191 NCE 2005 dated: 19-08-2005.
2. Government Order No. EN 100 NCE 2005 dated: 30-08-2005
3. Government Order No. EN 178 NCE 2008 dated: 24-12-2008.
4. Letter No: KRED/08/KRBL-SIL/2010/2306 dated 2/4-08-2010 received from the Managing Director, Karnataka Renewable Energy Development Limited, Bangalore.

**Preamble :**

In the Government Order read at (1) above, sanction has been accorded to implement 82.6 MW capacity wind power project at Raichur and Bellary district to M/s Suzlon Developers Limited.

In the Government Order read at (2) above, sanction has been accorded for change of company's name from M/s Suzlon Developers Limited and M/s Suzlon Developers Private limited to M/s Suzlon Infrastructure Limited.

In the Government Order read at (3) above, sanction has been accorded for enhancement of wind power capacity from 7.20 MW to 30.00 MW of M/s Suzlon Infrastructure Limited.

In the letter read at (4) above, the managing director, Karnataka Renewable Energy Development Limited, Bangalore has recommended to the Government for transfer of 1.5 MW wind power capacity in favour of M/s Avon Cycles Limited from out of 30.00 MW capacity sanctioned in favour of M/s Suzlon Infrastructure limited at land sy. No. 40 of Eachanal village, Gangavati Taluk, Koppal district and further the M.D., KREDL has stated the proposed transferred project is scheduled for commissioning during the Financial year 2010-11.

The proposal has been examined in detail and issued following Orders:-

**GOVERNMENT ORDER NO: EN 485 NCE 2010, BANGALORE, DATED 28TH DECEMBER 2010.**

Government accords approval for transfer of 1.5 MW wind power capacity in favour of M/s Avon Cycles Limited from out of 30.00 MW capacity sanctioned in favour of M/s Suzlon Infrastructure Limited at land Sy. No. 40 of Eachanal village, Gangavati Taluk, Koppal District as detailed below and subject to the following conditions:-

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Eachanal | Gangavathi/Koppal | 40 | 2Acres per WTG of capacity 1.5 MW for 1 No. | KAL-13 |

1. M/s Avon Cycles Limited shall execute an agreement with Government within 45 (forty five) days from the date of issue of this Order.
2. **PPA** is assigned to GESCOM. GESCOM shall execute the PPA with M/s Avon Cycles Limited.
3. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka,
**SURESH B. KRISHNAPPANAVAR**
Under Secretary to Government
Energy Department

P.R. 137

## ENERGY SECRETARIAT

**Sub:** Enhancement of wind power capacity from 6.00 MW to 10.5 MW in favour of M/s Suzlon Energy Limited-reg.

**Read :**
1. Government Order No. DE 230 NCE 2004 dated: 13-09-2004.
2. Letter No: KRED/08/SEL-Soundatti (6 MW to 10.5 MW)/2010/3358 dated 7/13-12-2010 received from the Managing Director, Karnataka Renewable Energy Development Limited, Bangalore.

**Preamble :**

In the Government Order read at (1) above sanction has been accorded for implementation of 91.00 MW capacity Wind Power Project at Belgaum and Bellary Districts in favour of M/s Suzlon Energy Limited.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 6.00 MW (part capacity of 91.00 MW) to 10.5 MW at Bestur in Belgaum district in favour of M/s Suzlon Energy Limited.

The proposal has been examined in detail and issued following Orders:-

**GOVERNMENT ORDER NO: EN 483 NCE 2010, BANGALORE, DATED 28TH DECEMBER 2010.**

Government accords approval enhancement of wind power capacity from 6.00 MW (part capacity of 91.00 MW) to 10.5 MW at Bestur village, Saundatti Taluk, Belgaum District in favour of M/s Suzlon Energy Limited as detailed below and time limit of the project is extended upto 25-06-2011.

| Geographical Area details | Sanctioned capacity in MW | Enhancement proposed in stage-I | No. of WTGs & rating in kw |
|---|---|---|---|
| A Plain terrain with no unidirectional description is located in North of Bestur village as peak 834 mt is categorized as open scrub.<br>It is held by the following geographical Co-ordinates:-<br><br>Latitude: $15^0$43'50''-$15^0$44'30''N<br>Longitude: $75^0$7'40''-$75^0$9'E<br>Peaks 834 m AMSL<br>Toposheet No : 48 M/2 | 6 MW | 4.5 MW | 10.5 MW<br>(5 x 2100) |

The Government has reserved the right to Cancel/modify this Order.

The other terms and conditions of the allotment Order read at (1) above shall continue as it is.

By Order and in the name of the Governor of Karnataka,
**SURESH B. KRISHNAPPANAVAR**
Under Secretary to Government
Energy Department

P.R. 138

## INFRASTRUCTURE DEVELOPMENT SECRETARIAT

**Sub:** Servicing of HUDCO Loan availed for procurement of land for Bangalore international Airport Project.

**Read :**
1. G.O. No. IDD 47 DIA 2006 dated 29-06-2007.
2. G.O. No. IDD 47 DIA 2006 (P) dated 24-09-2007.
3. G.O. No. IDD 47 DIA 2006 (P) dated 25-09-2007.
4. G.O. No. IDD 47 DIA 2006 (P) dated 03-12-2007.
5. G.O. No. IDD 47 DIA 2006 dated 25-03-2008.
6. G.O. No. IDD 47 DIA 2006 dated 23-06-2008.
7. G.O. No. IDD 47 DIA 2007 dated 16-09-2008.
8. G.O. No. IDD 47 DIA 2007 dated 15-12-2008.
9. G.O. No. IDD 47 DIA 2006 dated 13-03-2009.
10. G.O. No. IDD 47 DIA 2006 dated 12-08-2009.
11. G.O. No. IDD 47 DIA 2006 dated 26-09-2009.
12. G.O. No. IDD 47 DIA 2006 dated 17-12-2009.
13. G.O. No. IDD 33 DIA 2010 dated 23-03-2010.
14. G.O. No. IDD 33 DIA 2010 dated 22-06-2010.
15. G.O. No. IDD 33 DIA 2010 dated 23-09-2010.
16. Letter No. DGM (IPD)/2129/2010-2011 dated 13-12-2010 of the Assistant General Manager (IPD-1, KSIIDC.

**Preamble :**

In the G.O's read at Sl. No. (1) to (15) above, periodical release of funds have been made to KSIIDC for servicing HUDCO loan for the period 2007, 2008, 2009 and for the quarters ending March, June and September 2010.

2. In the letter dated 13-12-2010 read at Sl. No. (16) above, the Assistant General Manager (IPD-I), KSIIDC has requested for release of an amount of Rs. 386.53 lakhs (Principal Rs. 272.58 lakhs + Interest Rs. 113.95 lakhs only) towards servicing of HUDCO loan for the quarter ending December 2010.

3. Government have considered release of funds for servicing of HUDCO loan for the quarter ending December 2010 and hence the following order.

**GOVERNMENT ORDER NO: IDD 33 DIA 2010, BANGALORE, DATED 21ST DECEMBER 2010.**

After careful examination of the proposal, sanction of the Government is a hereby accorded for release of Rs. 386.53 lakhs (Rupees Three crore eighty six lakhs and fifty three thousand only) to KSIIDC under the Head of Account **"5465-01-190-1-04 (P) – BIAP Assistance for repayment of HUDCO loan – 240 Debt Servicing"** towards HUDCO loan service for the quarter ending December 2010, out of the Budget Provision of Rs. 2599.00 lakhs in 2010-11.

2) The Managing Director , KSIIDC is authorized to draw the amount on a payees receipt duly countersigned by the Under Secretary to Government, Infrastructure Development Department.

3) This Order is issued in concurrence of F.D vide U.O. Note No. FD 2017 dated 18-12-2010.

By Order and in the name of the Governor of Karnataka,
**C.A. Baburavindranath Patel**
Under Secretary to Government,
Infrastructure Development Department

P.R. 139

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಪಾಟೀಲ್, ಪಿ.ಐ. ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಡಿಇ/64/ಉವ/2009 ದಿನಾಂಕ: 05–05–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)57/2009–10 ದಿನಾಂಕ: 05–03–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 15–04–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)57/2009–2010 ದಿನಾಂಕ 13–08–2010.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 159 ಸಿಎನ್‌ಎಸ್ 10 ದಿನಾಂಕ 08–12–2010.

**ಪ್ರಸ್ತಾವನೆ :**

ಶ್ರೀ ಎಸ್.ಆರ್. ಪಾಟೀಲ್, ಪಿ.ಐ. ರೋಣ ಪೊಲೀಸ್ ಠಾಣೆ, ಇವರು ಬೆಳಗಾವಿಯ ಕ್ಯಾಂಪ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ

ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

1) ಆ.ಪೊ.ಅ. ನೀವು ಶ್ರೀ ಎಸ್.ಆರ್. ಪಾಟೀಲ್, ಪಿ.ಐ., ಕ್ಯಾಂಪ ಪೊಲೀಸ್ ಠಾಣೆ, ಬೆಳಗಾವಿ ನಗರ ಸಧ್ಯ ಸಿಪಿಐ ರೋಣ ವೃತ್ತ, ಗದಗ ಜಿಲ್ಲೆ, ಬೆಳಗಾವಿ ನಗರದ ಕ್ಯಾಂಪ ಪೊಲೀಸ್ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರಾಗಿ ದಿನಾಂಕ: 08–09–2006 ರಿಂದ 10–06–2007 ರವರೆಗೆ ಸೇವೆ ಸಲ್ಲಿಸುತ್ತಿದ್ದಾಗ, ನಗರದ ಎ.ಪಿ.ಎಂ.ಸಿ. ಪೊಲೀಸ್ ಠಾಣೆಯ ಉಸ್ತುವಾರಿ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ ನೀವು ನಿಮಗೆ ಮೇಲಾಧಿಕಾರಿಗಳೂ ಎಲ್ಲ ಪೊಲೀಸ್ ಠಾಣೆಗಳ ವ್ಯಾಪ್ತಿಯಲ್ಲಿ ಬರುವ ಪ್ರತಿಮೆಗಳಿಗೆ ಸಿಬ್ಬಂದಿಯನ್ನು ನಿಯೋಜಿಸಿ ಉಸ್ತುವಾರಿಯನ್ನು ಮಾಡುವಂತೆ ಸೂಚನೆಗಳನ್ನು ನೀಡಿದ್ದರೂ ಸಹಿತ ಒಬ್ಬ ಜವಾಬ್ದಾರಿಯತ ಪೊಲೀಸ್ ಅಧಿಕಾರಿಯಾಗಿ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೆ ಅಧೀನ ಅಧಿಕಾರಿಗಳು ಸಿಬ್ಬಂದಿಯನ್ನು ನಿಯಮಿಸಿದ್ದಾರೋ ಇಲ್ಲವೋ ಅನ್ನುವುದನ್ನು ಪರಿಶೀಲಿಸದೆ ಎ.ಪಿ.ಎಂ.ಸಿ. ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಶಿವಾಜಿ ಪ್ರತಿಮೆಗೆ ಅವಮಾನವಾಗಲು ಅವಕಾಶ ನೀಡಿ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

2) ಆ.ಪೊ.ಅ. ನೀವು ಶ್ರೀ ಎಸ್.ಆರ್. ಪಾಟೀಲ್, ಪಿ.ಐ., ಕ್ಯಾಂಪ ಪೊಲೀಸ್ ಠಾಣೆ, ಬೆಳಗಾವಿ ನಗರ ಸಧ್ಯ ಸಿಪಿಐ ರೋಣ ವೃತ್ತ, ಗದಗ ಜಿಲ್ಲೆ, ಬೆಳಗಾವಿ ನಗರದ ಕ್ಯಾಂಪ ಪೊಲೀಸ್ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರಾಗಿ ದಿನಾಂಕ: 08–09–2006 ರಿಂದ 10–06–2007 ರವರೆಗೆ ಸೇವೆ ಸಲ್ಲಿಸುತ್ತಿದ್ದಾಗ, ನಗರದ ಎ.ಪಿ.ಎಂ.ಸಿ. ಪೊಲೀಸ್ ಠಾಣೆಯ ಉಸ್ತುವಾರಿ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ನೀವು ಜವಾಬ್ದಾರಿಯುತ ಪೊಲೀಸ್ ಅಧಿಕಾರಿ ಸ್ಥಾನದಲ್ಲಿದ್ದು ದಿನಾಂಕ: 08–05–2007 ರಂದು ಠಾಣೆಯ ವ್ಯಾಪ್ತಿಯ ಕಂಗ್ರಾಳ ಕೆ.ಎಚ್. ಗ್ರಾಮದಲ್ಲಿರುವ ಶಿವಾಜಿ ಮಹಾರಾಜರ ಪ್ರತಿಮೆಗೆ ಕಿಡಿಗೇಡಿಗಳು ಚಪ್ಪಲಿ ಹಾರ ಹಾಕಿ ಅವಮಾನ ಪಡಿಸಿದ ಘಟನೆ ನಡೆದಿದ್ದರಿಂದ ಸದರಿ ಘಟನಾ ಸ್ಥಳಕ್ಕೆ ನಿಮ್ಮ ಮೇಲಾಧಿಕಾರಿಗಳಾದ ಡಿ.ಎಸ್.ಪಿ. ಮಾರ್ಕೆಟ್ ಉಪ–ವಿಭಾಗ, ಬೆಳಗಾವಿ ನಗರ ಇವರು ಮುಂಜಾನೆ 7 ಗಂಟೆ 43 ನಿಮಿಷ 28 ಸೆಕೆಂಡಿಗೆ ತಮ್ಮ ಮೊಬೈಲ್ ಪೋನಿನಿಂದ ನಿಮ್ಮ ಮೊಬೈಲ್ ಪೋನಿಗೆ ಸಂಪರ್ಕಿಸಿ ನಿಮಗೆ ಕೂಡಲೇ ಬರಲು ಸೂಚಿಸಿದ್ದರೂ ಸಹ ನೀವು ಘಟನಾ ಸ್ಥಳಕ್ಕೆ ಕೂಡಲೇ ಹೋಗದೆ ತಡವಾಗಿ ಹೋಗಿ ಅಲ್ಲಿ ಸೇರಿದ ಜನರನ್ನು ನಿಯಂತ್ರಿಸಲು ಪ್ರಯತ್ನಿಸದೇ ಅವರಿಗೆ ತಿಳಿಹೇಳುವ ಕಾರ್ಯದಲ್ಲಿ ಮಗ್ನರಾಗದೇ ತಟಸ್ಥರಾಗಿ ನಿಂತುಕೊಂಡು ಕರ್ತವ್ಯವಿಮುಖರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 05–05–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05–03–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಈ ಕುರಿತು ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 70 ಪೊಸಿಅ 2010, ಬೆಂಗಳೂರು, ದಿನಾಂಕ : 23ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಆರ್. ಪಾಟೀಲ್, ಪಿ.ಐ., ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆ, ಇವರ ವಿರುದ್ಧದ ಮೇಲ್ಮನವಿ ಪ್ರಾಧಿಕಾರದ ದಿನಾಂಕ: 05–03–2010ರ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ "ವಾಗ್ದಂಡನೆಯನ್ನು" ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ. ಆರ್. 140

## HEALTH AND FAMILY WELFARE SECRETARIAT

**Sub:** Funding of Vajpayee Arogyashree Scheme implemented by Government of Karnataka through Suvarna Arogya Suraksha Trust (SAST), under the World Bank assisted Karnataka Health System Development & Reform Project (IDA Credit 4229-IN) reg.

**Read :** Govt. Order No. HFW 216 CGE 2008, Bangalore,dated : 20-2-2009.

**Preamble :**

Karnataka Health System Development & Reform Project, a World Bank assisted Project, is being implemented from January 2007 with IDA Credit of US $ 141.83 million or 97.60 million SDRs. There are two streams of financing under the Project i.e. Project Finance with US $ 86.83 million & Program Finance US $ 55 million, Project Finance with 90% IDA assistance, has several innovative components of which Health Financing is one with a credit allocation of US $ 9.23 million or SDR 6.30 million.

As per PAD. Health Financing sub component envisaged design and implementation of a Health Insurance Pilot. While the modalities of implementing the Health Financing Sub Component under the KHSDRP, by designing a Health Insurance Pilot was being deliberated, GoK sanctioned "Suvarna Arogya Suraksha Scheme (since renamed as Vajpayee Arogyashree Scheme)" vide G.O. cited above, extending cashless health benefits to the BPL families. For implementation of the Scheme, GoK has set up the Suvarna Arogya Suraksha Trust (SAST). Presently, Vajpayee Arogyashree Scheme is being implemented in Gulbarga and Belgaum Divisions.

In view of GoK launching the Vajpayee Arogyashree Scheme (VAS) World Bank in its October 2009 & May 2010 implementation Support Missions agreed to dovetail the Bank credit of US $ 9.23 million under the VAS. At the Project Mid Term Review (MTR) held in July 2010 and the subsequent follow up meeting held on 2nd November 2010, finality has been reached on the milestones and modalities of release of Bank credit. For the purpose of utilizing the IDA credit of US $ 9.23 million under the Health Financing component, Bank has approved SAST as a Project Implementation Agency under KHSDR Project.

As per the agreement reached with the Bank, credit disbursement will be linked to settlement of claims of empanelled hospitals by the SAST for service provided to the beneficiaries. SAST has been setting claims of accredited hospitals for extending cashless benefits to the eligible BPL families from April 2010. Claims settled after 1st April 2010 will be eligible for reimbursement. Credit US $ 9.23 million will be disbursed in tranches subject to achievement of following milestones.

| Tranche | Milestones |
|---|---|
| 1st Tranche (25% of the credit allocation) | SAST develops : (A) staffing plan. (B) information system specifications, (C) Information, education and communication (IEC) strategy ; and (E) term of reference for a monitoring/verification system for Medical Insurance Claims. |
| 2nd Tranche (25% of the credit allocation) | (A) Key SAST staff are appointed and a management capacity building plan is developed ; and (B) monitoring/verification system for Medical Insurance Claims functional. |
| 3rd Tranche (25% of the credit allocation) | (A) Contractor pilot tests IT system ; (B) IEC activities started ; and (C) cost/rates analysis for Medical Insurance Claims completed. |
| 4th Tranche (25% of the credit allocation) | (A) IT system is functional ; (B) management capacity-building activities start ; and (C) analysis from monitoring/verification system for Medical Insurance Claims completed. |

Subject to achievement of the milestones, credit disbursement by the Bank will be restricted to 90% of the claims settled in the quarter by the SAST within the overall ceiling of US$ 2.31 million for each tranche.

Project has to submit quarterly Financial Monitoring Reports (FMRs) under the Project Finance component, to claim Bank share of 90% credit. Separate Budget heads are provided for the Project Finance Sub Components including Health Financing with an allocation of Rs 1900 lakhs for 2010-11 under 2210-06-800-083 KHSDRP Health Financing. Project has to book expenses under the Budget Head 2210-06-800-0-83 KHSDRP Health Financing by reimbursing the claims of empanelled hospitals settled by SAST, for claiming 90% reimbursement from the Bank.

In view of the concurrence of the Bank to recognise SAST as a Project Implementing Agency and fund the VAS implemented by it under the Health Financing component to an extent of US $ 9.23 and disbursement being made in four tranches subject to achievement of the agreed milestones, Project Steering Committee at its… meeting on 2.12.2010 considered the proposal for reimbursement of the claims of empanelled hospitals settled by SAST, and approved the following procedure for reimbursement.

(i) SAST shall submit monthly claim for seeking reimbursement of the claims settled by it in favour of the accredited hospitals with the list of patients, duly certified by the Executive Director ;

(ii) Based on the claim received from the SAST, Project shall submit DC Bill to the Treasury for drawing the amount from the Budget Head 2210-06-800-0-83 KHSDRP Health Financing and issue of cheque in favour of SAST.

(iii) Expenditure booked under Budget Head 2210-06-800-0-83 KHSDRP Health Financing towards reimbursement to SAST, shall be claimed from the Bank by including it in the quarterly FMR with report on progress on achievement of Milestones.

Hence the following order.

**GOVERNMENT ORDER No. HFW/KHSDRP (PR)/H1/16/2009-10, BANGALORE, DATED 23-12-2010.**

In the circumstances mentioned in the preamble, Government is pleased to approve Suvarna Arogya Suraksha Trust (SAST) as a Project Implementation Agency under the World Bank assisted Karnataka Health System Development & Reform Project (IDA Credit 4229-IN) for purposes of implementing Health Insurance component of the Project and dovetailing the Bank credit of US $ 9.23 million or SDR 6.30 million, under the Govt. of Karnataka sponsored Vajpeyee Arogyashree Scheme (VAS) for extending cashless benefits to BPL families through a network of accredited hospitals.

Claims settled by SAST in favour of accredited hospitals under the Vajpayee Arogyashree Scheme from 1.4.2010 and onwards shall be eligible for reimbursement from the Bank assisted KHSDR Project on a quarterly basis within the overall ceiling of US $ 10.25 million & within the Project closure date of 31-3-2012, subject to satisfactory achievement of the agreed milestones, as detailed in the preamble.

Following procedure is stipulated for receipt of claims from SAST, Settlement of the claims by the Project to SAST and obtaining reimbursement of the Bank credit by the Project :

(i) SAST shall submit monthly claim to the Project for seeking reimbursement of the claims settled by it in favour of the accredited hospitals in the proforma prescribed by the Bank, duly certified by the Executive Director.

(ii) Monthly claim by SAST shall be supported by a status report on the achievement of milestones stipulated by the Bank as a condition for providing the Bank credit of US $ 9.23 million and disbursement of the same in four tranches with a cap of US $ 2.31 million for each tranche ;

(iii) Since, Project accounts are audited by the C & AG, expenditure to be booked under KHSDRP Health Financing by way of reimbursement of claims settled by the SAST, will also be subject to audit by the C & AG, in the process of annual audit of the Project accounts. SAST will put in place a system of internal audit and submit monthly claims after subjecting it to internal audit, to ensure compliance with the procedural aspects and eligibility of the claims for reimbursement by tha Bank;

(iv) Based on the claim received from the SAST and subject to satisfactory progress on the milestones enabling drawal of Bank credit under the Health Financing component, Project shall submit DC Bill to the Treasury for issue of cheque in favour of SAST, for reimbursing the claims settled amount to SAST;

(v) Claims settled by the Project in favour of SAST shall be claimed by the Project from the Bank by including it in the quarterly FMR with status report on the milestones progress/achievement thereof.

Expenditure on this account is debitable to Head of account 2210-06-800-0-83 KHSDRP Health Financing.

By Order and in the name of the Governor of Karnataka,

**K.N. RAMESH**

Deputy Secretary to Govt.

KHSDRP

Health and Family Welfare Department

P.R. 144

## HORTICULTURE SECRETARIAT

**Sub:** "Scheme for Integrated Farming in Coconut for Productivity/Improvement with Coconut Development Board Assistance (100% CDB)"-Release of State share-reg.

**Read :** 1. Govt. Order No. HCD 51 HPP 2010, dated : 8-12-2010.

2. Letter of Director of Horticulture No. ತೋಇ/ತೋಬೆ/ಸತೋಅ–2/01/2010–11/1256, dated 10-12-2010.

**PREAMBLE :**

1. The Cocount Development Board share of Rs. 1,56,250 has been released to the Director of Horticulture vide Government Order read at (1) above for the following purpose.

| Particulars | Amount (Rs.) |
|---|---|
| Being the full share of the Board for implementation of shceme "Production & Distribution of hybrids/other local tall seedlings" in the State of Karnataka during 2010-11. | 1,56,250 |

2. The Director of Horticulture has requested to release the matching State share of Rs. 1,56,250/- for the same as the said component has a sharing pattern of 50:50 between CDB and the State Government. Hence this Order :

**GOVERNMENT ORDER No. HCD 51 HPP 2010, BANGALORE, DATED 24-12-2010.**

Govenrment sanction is hereby accorded to release an amount of Rs. 1,56,250 (Rupees One Lakh Fifty Six Thousand Two Hundred Fifty only) to the Director of Horticulture under the "Scheme for Integrated Farming in Coconut for Productivity/Improvement in the State" during 2010-11 under the Head of Account 2401-00-108-2-35-100 (Financial Assistance/Relief) towards the matching State Share (50%).

2.This order is issued as per the concurrence by the Internal Financial Advisor, Agriculture and Horticulture Department vide Note No. ತೋಇ 23 ಆಆಸ 2010, dated 22-12-2010

By Order and in the name of the Governor of Karnataka,

**B.C. PRAKASH**

Under Secretary to Government,

Horticulture Department

P.R. 145

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಡಾ॥ ಎನ್. ರಾಜಗೋಪಾಲ್, ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರಿಗೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಪಿನ ಅನುಸಾರ ಜಂಟಿ ನಿರ್ದೇಶಕರ ಹುದ್ದೆಗೆ ನೀಡಲಾದ ಮುಂಬಡ್ತಿಗೆ ಪೂರ್ವಾನ್ವಯವಾಗಿ ಅರ್ಹತಾ ದಿನಾಂಕವನ್ನು ನಿಗದಿಪಡಿಸುವಿಕೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 34 ಪಅಸೇ 99 (ಭಾಗ), ದಿನಾಂಕ : 22–8–2002.
2. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ : 13751/2002, 8088/2006 ಮತ್ತು 9193–94/2008, ತೀರ್ಪು ದಿನಾಂಕ : 18–01–2010.
3. ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 152 ಪಅಸೇ 2002, ದಿನಾಂಕ : 7–12–2004.
4. ಡಾ॥ ಎನ್. ರಾಜಗೋಪಲ್, ನಿರ್ದೇಶಕರು, ಇವರ ಮನವಿ ದಿನಾಂಕ : 15–3–2010.
5. ಪತ್ರ ಸಂಖ್ಯೆ : ಆಪಸಂ/ಕಾಕೋ/ವಿವ–17/2008–09, ದಿನಾಂಕ : 4–6–2010.
6. ಪತ್ರ ಸಂಖ್ಯೆ : ಆಪಸಂ/ಸಿಬ್ಬಂದಿ–1/ವಿವ–17/2008–09, ದಿನಾಂಕ : 17–8–2010 ಮತ್ತು 29–10–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1) ರ ಆದೇಶದಲ್ಲಿ ಡಾ॥ ಎನ್. ರಾಜಗೋಪಾಲ್ ಇವರಿಗೆ ಸಹಾಯಕ ನಿರ್ದೇಶಕರ ಜ್ಯೇಷ್ಠತಾ ಪಟ್ಟಿಯಲ್ಲಿ ಜ್ಯೇಷ್ಠತಾ ಸಂಖ್ಯೆ : 315–ಎ ಹಾಗೂ ಉಪ ನಿರ್ದೇಶಕರ ಜ್ಯೇಷ್ಠತಾ ಪಟ್ಟಿಯಲ್ಲಿ ಜ್ಯೇಷ್ಠತಾ ಸಂಖ್ಯೆ : 51–ಎ ಎಂದು ನಿಗದಿಪಡಿಸಲಾಗಿತ್ತು.

2. ಡಾ॥ ಎನ್. ರಾಜಗೋಪಾಲ್ ಇವರಿಗೆ ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರ ಹುದ್ದೆಗೆ ನಿಗದಿಪಡಿಸಿರುವ ಜ್ಯೇಷ್ಠತೆಯನ್ನು ಹಾಗೂ ಅವರಿಗೆ ಜಂಟಿ ನಿರ್ದೇಶಕರು, ಅಪರ ನಿರ್ದೇಶಕರು ಹಾಗೂ ನಿರ್ದೇಶಕರ ಹುದ್ದೆಗೆ ನೀಡಲಾದ ಮುಂಬಡ್ತಿಯನ್ನು ಪ್ರಶ್ನಿಸಿ, ಇಲಾಖೆಯ ಕೆಲವು ಅಧಿಕಾರಿಗಳು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ : 13751/2002, 8088/2006 ಹಾಗೂ 9193–94/2008 ಗಳನ್ನು ದಾಖಲಿಸಿದ್ದರ ಮೇರೆಗೆ, ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಡಾ॥ ಎನ್. ರಾಜಗೋಪಾಲ್ ಇವರಿಗೆ ಅರ್ಜಿ ಸಂಖ್ಯೆ : 13751/2002 ಮೇಲೆ ಕರ್ನಾಟಕ ಆಡಳಿತ ನ್ಯಾಯಮಂಡಳಿ ನೀಡುವ ಆದೇಶಕ್ಕೊಳಪಟ್ಟು ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2(3)ರನ್ವಯ ಜಂಟಿ ನಿರ್ದೇಶಕರ ಹುದ್ದೆಗೆ ದಿನಾಂಕ : 22–2–1997 ರಿಂದ ಅನ್ವಯಿಸುವಂತೆ ಪೂರ್ವಾನ್ವಯವಾಗಿ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

3. ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ : 13751/2002, 8088/2006 ಹಾಗೂ 9193–94/2008 ಕ್ಕೆ ಸಂಬಂಧಿಸಿದಂತೆ ದಿನಾಂಕ : 18–1–2010 ರಂದು ನೀಡಿರುವ ತೀರ್ಪಿನಲ್ಲಿ "We have rejected all contentions of the Applicants to be senior to Dr. N. Rajgopal, Dr. N. Rajgopal has been held by us unequivocally to be senior to all the Applicants at every stage from Assistant Director to Deputy Director to Joint Director to Additional Director" ಎಂದು ಆದೇಶಿಸಿದೆ ಹಾಗೂ ಸದರಿ ಅರ್ಜಿಗಳನ್ನು ವಜಾಗೊಳಿಸಿದೆ.

4. ಮೇಲೆ ಓದಲಾದ ಕ್ರಮಸಂಖ್ಯೆ (3)ರ ಮನವಿಯಲ್ಲಿ ಡಾ॥ ಎನ್. ರಾಜಗೋಪಾಲ್, ನಿರ್ದೇಶಕರು, ಪಶುಪಾಲನಾ ಇಲಾಖೆ, ಬೆಂಗಳೂರು ಇವರು ಉಪನಿರ್ದೇಶಕರ ಹುದ್ದೆಯಲ್ಲಿ ನಿಗದಿಪಡಿಸಲಾದ ಜ್ಯೇಷ್ಠತಾ ಸಂಖ್ಯೆ : 51–ಎ ಎಂದು ಕಾಣಿಸಿದ್ದು, ಸದರಿ ಹುದ್ದೆಯ ಜೇಷ್ಠತಾ ಪಟ್ಟಿಯ ಕ್ರಮಸಂಖ್ಯೆ 59 ರಲ್ಲಿ ಕಾಣಿಸಲಾದ ಡಾ॥ ಎಂ.ಎ. ನಂಜಪ್ಪರವರಿಗಿಂತ ಹಿರಿಯ ಅಧಿಕಾರಿಯಾಗಿದ್ದು, ಡಾ॥ ಎಂ.ಎ. ನಂಜಪ್ಪರವರಿಗೆ ಉಪ ನಿರ್ದೇಶಕರ ಹುದ್ದೆಯಿಂದ ಜಂಟಿ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡುವಲ್ಲಿ ಅರ್ಹತಾ ದಿನಾಂಕವನ್ನು 27–10–1993 ಎಂದು ನಿಗದಿಪಡಿಸಿರುವುದರಿಂದ ಜ್ಯೇಷ್ಠತೆಯಲ್ಲಿ ಹಿರಿಯರಾದ ಅವರಿಗೂ ಸಹ ಜಂಟಿ ನಿರ್ದೇಶಕರ ಹುದ್ದೆಗೆ ನೀಡಿದ ಮುಂಬಡ್ತಿಯ ಅರ್ಹತಾ ದಿನಾಂಕವನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶದ ಹಿನ್ನೆಲೆಯಲ್ಲಿ, ದಿನಾಂಕ : 22–2–1997ರ ಬದಲಾಗಿ ದಿನಾಂಕ : 27–10–1993 ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮ (ಆರ್.ಪಿ.ಪಿ.ಪಿ. ಆಕ್ಟ್) 1978ರ ನಿಯಮ 2(3)ರಂತೆ ಪೂರ್ವಾನ್ವಯವಾಗಿ ನಿಗದಿಪಡಿಸಿ ಎಲ್ಲಾ ಸೌಲಭ್ಯಗಳನ್ನು ಒದಗಿಸುವಂತೆ ಕೋರಿರುತ್ತಾರೆ.

5. ಮೇಲೆ ಓದಲಾದ ಕ್ರಮಸಂಖ್ಯೆ (4) ಮತ್ತು (5)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಡಾ॥ ಎನ್. ರಾಜಗೋಪಾಲ್, ನಿರ್ದೇಶಕರು ಇವರಿಗೆ ಉಪ ನಿರ್ದೇಶಕರ ಹುದ್ದೆಯಲ್ಲಿ ನಿಗದಿಪಡಿಸಲಾದ ಜ್ಯೇಷ್ಠತಾ ಕ್ರಮಸಂಖ್ಯೆ (51)(ಎ) ಎಂದು ಕಾಣಿಸಿದ್ದು, ಉಪ ನಿರ್ದೇಶಕರ ಹುದ್ದೆಯ ಜ್ಯೇಷ್ಠತಾ ಪಟ್ಟಿಯ ಕ್ರಮಸಂಖ್ಯೆ (59)ರಲ್ಲಿ ಕಾಣಿಸಲಾದ ಡಾ॥ ಎಂ.ಎ. ನಂಜಪ್ಪ, ನಿವೃತ್ತ ಜಂಟಿ ನಿರ್ದೇಶಕರಿಗಿಂತ ಹಿರಿಯ ಅಧಿಕಾರಿಯಾಗಿದ್ದು, ಡಾ॥ಎಂ.ಎ. ನಂಜಪ್ಪ ಇವರಿಗೆ ಉಪ ನಿರ್ದೇಶಕರ ಹುದ್ದೆಯಿಂದ ಜಂಟಿ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡುವಾಗ ಅರ್ಹತಾ ದಿನಾಂಕವನ್ನು ದಿನಾಂಕ 27–10–1993 ರಂದು ತೋರಿಸಿದ್ದು, ಜೇಷ್ಠತೆಯಲ್ಲಿ ಡಾ॥ ಎನ್. ರಾಜಗೋಪಾಲ್ ರವರು ಡಾ॥ ಎಂ.ಎ. ನಂಜಪ್ಪರವರಿಗಿಂತ ಹಿರಿಯ ಅಧಿಕಾರಿಯಾಗಿರುವುದರಿಂದ, ಡಾ॥ ಎನ್. ರಾಜಗೋಪಾಲ್ ಇವರಿಗೆ ಜಂಟಿ ನಿರ್ದೇಶಕರ ಹುದ್ದೆಗೆ ನೀಡಿದ ಮುಂಬಡ್ತಿಯ ಅರ್ಹತಾ ದಿನಾಂಕ : 22–2–1997ರ ಬದಲು ದಿನಾಂಕ : 27–10–1993 ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ) 1978ರ ನಿಯಮ 2(3) ರಂತೆ ಪೂರ್ವಾನ್ವಯವಾಗಿ ನಿಗದಿಪಡಿಸಿ ತದನಂತರದ ಎಲ್ಲಾ ಹುದ್ದೆಗಳಲ್ಲೂ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಮಂಜೂರಾತಿ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ ಮತ್ತು ಡಾ॥ ಎನ್. ರಾಜಗೋಪಾಲ್ ಅವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ, ನ್ಯಾಯಾಂಗ ವಿಚಾರಣೆ, ದಂಡ ವಿಧಿಸುವ ಪ್ರಕರಣ ಬಾಕಿ ಇರುವುದಿಲ್ಲವೆಂದು, ಅವರ ಸೇವೆ/ಕಾರ್ಯನಿರ್ವಹಣೆಯು ತೃಪ್ತಿಕರವಾಗಿದ್ದು, ನಿಯಮಾನುಸಾರ ಹಾಗೂ ವೃಂದ ಮತ್ತು ನೇಮಕಾತಿ ನಿಯಮದನ್ವಯ ಮುಂಬಡ್ತಿಗೆ ಅರ್ಹರಿದ್ದಾರೆಂದು ದೃಢೀಕರಿಸಿರುತ್ತಾರೆ.

6. ಆಯುಕ್ತರ ಪ್ರಸ್ತಾವನೆ ಮತ್ತು ಡಾ॥ ಎನ್. ರಾಜಗೋಪಾಲ್‌ರವರ ಮನವಿಗಳೆರಡನ್ನೂ ಪರಶೀಲಿಸಲಾಯಿತು. ಉಪ ನಿರ್ದೇಶಕರ ಜ್ಯೇಷ್ಠತಾ ಪಟ್ಟಿಯಲ್ಲಿ ಡಾ॥ ಎನ್. ರಾಜಗೋಪಾಲ್‌ರವರ ಜೇಷ್ಠತಾ ಸಂಖ್ಯೆ 51–ಎ ಆಗಿದ್ದು, ಡಾ॥ ಎಂ.ಎ. ನಂಜಪ್ಪರವರ ಜ್ಯೇಷ್ಠತಾ ಸಂಖ್ಯೆ 59 ಆಗಿರುತ್ತದೆ. ಸೇವೆಯಲ್ಲಿ/ಜೇಷ್ಠತೆಯಲ್ಲಿ ಡಾ॥ ಎನ್. ರಾಜಗೋಪಾಲ್‌ರವರು ಡಾ॥ ಎಂ.ಎ. ನಂಜಪ್ಪರವರಿಗಿಂತ ಹಿರಿಯ ಅಧಿಕಾರಿಯಾಗಿರುತ್ತಾರೆ. ಡಾ॥ ಎನ್. ರಾಜಗೋಪಾಲ್ ಇವರಿಗೆ ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರ ಹುದ್ದೆಗೆ ನಿಗದಿಪಡಿಸಿರುವ ಜೇಷ್ಠತೆಯನ್ನು ಪ್ರಶ್ನಿಸಿ ಹಾಗೂ ಜಂಟಿ ನಿರ್ದೇಶಕರು, ಅಪರ ನಿರ್ದೇಶಕರು ಹಾಗೂ ನಿರ್ದೇಶಕರ ಹುದ್ದೆಗೆ ನೀಡಲಾದ ಮುಂಬಡ್ತಿಯನ್ನು ಪ್ರಶ್ನಿಸಿ ಇಲಾಖೆಯ ಕೆಲವು ಅಧಿಕಾರಿಗಳು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ : 13751/2002, 8088/2006 ಹಾಗೂ 9193–94/2008 ಗಳನ್ನು ದಾಖಲಿಸಿದ ಕಾರಣ, ದಿನಾಂಕ : 07–12–2004ರ ಆದೇಶದಲ್ಲಿ ಹಿರಿಯ ಅಧಿಕಾರಿಯಾದ ಡಾ॥ ಎನ್. ರಾಜಗೋಪಾಲ್ ಇವರಿಗೆ ಅರ್ಜಿ ಸಂಖ್ಯೆ : 13751/2002ರಲ್ಲಿ ಕೆ.ಎ.ಟಿ. ನೀಡುವ ಆದೇಶಕ್ಕೊಳಪಟ್ಟು ಪೂರ್ವಾನ್ವಯವಾಗಿ ಜಂಟಿ ನಿರ್ದೇಶಕ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ, ಮುಂಬಡ್ತಿ ಅರ್ಹತಾ ದಿನಾಂಕ : 22–2–1997 ಎಂದು ನಿಗದಿಪಡಿಸಲಾಗಿದೆ. ಅವರಿಗಿಂತ ಕಿರಿಯ ಅಧಿಕಾರಿಯಾದ ಡಾ॥ ಎಂ.ಎ. ನಂಜಪ್ಪ ಇವರಿಗೆ ಪೂರ್ವಾನ್ವಯವಾಗಿ ಜಂಟಿ ನಿರ್ದೇಶಕ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಿ, ಮುಂಬಡ್ತಿ ಅರ್ಹತಾ ದಿನಾಂಕ 27–10–1993 ಎಂದು ನಿಗದಿಪಡಿಸಲಾಗಿದೆ. ಇದೀಗ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಡಾ॥ ಎನ್. ರಾಜಗೋಪಾಲ್‌ರವರ ಪರವಾಗಿ ತೀರ್ಪು ನೀಡಿ ಅವರ ಸೇವಾಹಿರಿತನವನ್ನು ಸಮರ್ಥಿಸಿದೆ. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಪಿನ ಪ್ರಕಾರ ಡಾ॥ ಎನ್. ರಾಜಗೋಪಾಲ್‌ರವರಿಗೆ ಸಹಾಯಕ ನಿರ್ದೇಶಕರು ಮತ್ತು ಉಪನಿರ್ದೇಶಕರ ಹುದ್ದೆಯಲ್ಲಿ ನಿಗದಿಪಡಿಸಿದ್ದ ಜ್ಯೇಷ್ಠತೆ ಹಾಗೂ ಜಂಟಿ ನಿರ್ದೇಶಕರು, ಅಪರ ನಿರ್ದೇಶಕರ ಹುದ್ದೆಗಳಿಗೆ ನೀಡಿರುವ ಪದೋನ್ನತಿಯು ಕ್ರಮಬದ್ಧವಾಗಿರುತ್ತದೆ ಮತ್ತು ಸದರಿಯವರು ಸಹಾಯಕ ನಿರ್ದೇಶಕರ ಹುದ್ದೆಯಿಂದ ಅಪರ ನಿರ್ದೇಶಕರ ಹುದ್ದೆಯವರೆಗಿನ ಎಲ್ಲಾ ಹಂತಗಳಲ್ಲಿಯೂ ಹಿರಿಯ ಅಧಿಕಾರಿಯಾಗಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಡಾ॥ ಎನ್. ರಾಜಗೋಪಾಲ್‌ರವರಿಗೆ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2(3)ರನ್ವಯ ಜಂಟಿ ನಿರ್ದೇಶಕರ ಹುದ್ದೆಯ ಮುಂಬಡ್ತಿ ಅರ್ಹತಾ ದಿನಾಂಕವನ್ನು ದಿನಾಂಕ: 22–2–1997 ಎಂದು ನಿಗದಿಪಡಿಸಿರುವುದನ್ನು ಮಾರ್ಪಾಡು ಮಾಡಿ ದಿನಾಂಕ : 27–10–1997 ರಿಂದ ಪೂರ್ವಾನ್ವಯವಾಗಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಲು ಹಾಗೂ ಪೂರ್ವಾನ್ವಯವಾಗಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಿದ ಪ್ರಯುಕ್ತ ಜಂಟಿ ನಿರ್ದೇಶಕರ ಹುದ್ದೆಗೆ

ನಿಯಮಾನುಸಾರ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ಮಂಜೂರು ಮಾಡಲು ತತ್ಪರಿಣಾಮವಾಗಿ ತದನಂತರದ ಎಲ್ಲಾ ಹುದ್ದೆಗಳಲ್ಲಿಯೂ ನಿಯಮಾನುಸಾರ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 50 ಪಅಸೇ 2010, ಬೆಂಗಳೂರು, ದಿನಾಂಕ : 27ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ॥ ಎನ್. ರಾಜಗೋಪಾಲ್, ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 152 ಪಅಸೇ 2002, ದಿನಾಂಕ : 7–12–2004ರಲ್ಲಿ ಜಂಟಿ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಸ್ಥಾನಪನ್ನ ಮುಂಬಡ್ತಿ ನೀಡಿ ಅರ್ಹತಾ ದಿನಾಂಕ : 22–2–1997 ಎಂದು ನಿಗದಿಪಡಿಸಿರುವುದನ್ನು ಮಾರ್ಪಾಡು ಮಾಡಿ, ಅವರಿಗೆ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2(3)ರನ್ವಯ, ಜಂಟಿ ನಿರ್ದೇಶಕರ ಹುದ್ದೆಗೆ ನೀಡಿದ ಮುಂಬಡ್ತಿ ದಿನಾಂಕವನ್ನು ದಿನಾಂಕ : 27–10–1993 ಎಂದು ಪೂರ್ವಾನ್ವಯವಾಗಿ ಪುನರ್ ನಿಗದಿಪಡಿಸಿ ಆದೇಶಿಸಿದೆ.

ಜಂಟಿ ನಿರ್ದೇಶಕರ ಹುದ್ದೆಯಲ್ಲಿ ಅರ್ಹತಾ ದಿನಾಂಕ ಮರುನಿಗದಿಪಡಿಸಿರುವುದರಿಂದ ಆ ಹುದ್ದೆಯಲ್ಲಿ ನಿಯಮಾನುಸಾರ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ. ತತ್ಪರಿಣಾಮವಾಗಿ ತದನಂತರದ ಎಲ್ಲಾ ಹುದ್ದೆಗಳಲ್ಲಿಯೂ ನಿಯಮಾನುಸಾರ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ಸಹ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ.ಎಂ. ರಾಜಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ. ಆರ್. 146 ಪಶುಸಂಗೋಪನೆ ಹಾಗೂ ಮೀನುಗಾರಿಕೆ ಇಲಾಖೆ. (**ಮೀನುಗಾರಿಕೆ**)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸುರೇಶ್ ಮೂರ್ತಿ, ಮಾಜಿ ಎ.ಪಿ.ಸಿ., ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ: 03/2007–08 ಓ.ಬಿ.: 116/2008–09 ದಿ: 24–9–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಸಿ.ಎ.ಆರ್., ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 01/ಅಪೀಲು 2/2009 ದಿನಾಂಕ: 10–9–09
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 25–7–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)80/2009–10 ದಿನಾಂಕ: 13–8–2010
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 153 ಸಿಎನ್‌ಎಸ್ 10 ದಿನಾಂಕ: 08–12–2010

**ಪ್ರಸ್ತಾವನೆ:**

ಶ್ರೀ ಸುರೇಶ್ ಮೂರ್ತಿ, ಇವರು ನಗರ ಸಶಸ್ತ್ರ ಪಡೆ (ಉತ್ತರ) ಬೆಂಗಳೂರಿನಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಸುರೇಶ್ ಮೂರ್ತಿ, ಪೇದೆ–696, "ಎ" ವಿಭಾಗ, ಸಿ.ಎ.ಆರ್. ಉತ್ತರ, ಬೆಂಗಳೂರು–45 ಆದ ನೀವು ದಿನಾಂಕ: 03–3–2005 ರಂದು ಶ್ರೀಮತಿ ಬೇಬಿ ರೇಖಾ ಬಿನ್ ಸಿದ್ದಯ್ಯ, ಎ.ಹೆಚ್.ಸಿ.–531, ಸಿ.ಎ.ಆರ್. ಕೇಂದ್ರ ಬೆಂಗಳೂರುರವರ ಮಗಳನ್ನು ಮದುವೆಯಾಗಿ ಕುಮಾರಿ ರಚನಾ ಎಂಬ ಒಂದು ಹೆಣ್ಣು ಮಗುವಿನ ತಂದೆಯಾಗಿರುತ್ತೀರಿ. ಮದುವೆಯ ಸಂದರ್ಭದಲ್ಲಿ ಶ್ರೀಮತಿ ಬೇಬಿರೇಖಾರವರ ತಂದೆಯವರಿಂದ ಹಣದ ಸಹಾಯವನ್ನು ವರದಕ್ಷಿಣೆ ರೂಪದಲ್ಲಿ ಪಡೆದುಕೊಂಡಿರುತ್ತೀರಿ ಮತ್ತು ಮದುವೆಯ ನಂತರವು ಅನೇಕ ಬಾರಿ ಹಣದ ಸಹಾಯಕ್ಕಾಗಿ ನಿಮ್ಮ ಪತ್ನಿಯವರಿಗೆ ಪೀಡಿಸಿರುತ್ತೀರಿ. ಅಲ್ಲದೆ ಶ್ರೀಮತಿ ಪಂಕಜಾ ಎಂಬುವರೊಂದಿಗೆ ಶ್ರೀ ರೇವಣ ಸಿದ್ದೇಶ್ವರ ಬೆಟ್ಟದಲ್ಲಿ ಎರಡನೆ ಮದುವೆಯಾಗಿ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿರುತ್ತೀರಿ. ಈ ಸಂಬಂಧ ನಿಮ್ಮ ವಿರುದ್ಧ ಬಸವನಗುಡಿ ಮಹಿಳಾ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 46/2007 ಕಲಂ 498ಎ 494 ಐಪಿಸಿ ರೆ/ವಿ 3 ಮತ್ತು 4 ಡಿ.ಪಿ. ಆ್ಯಕ್ಟ್ ಪ್ರಕಾರ ದಾಖಲಾಗಿರುತ್ತದೆ. ಇದು ನಿಮ್ಮ ದುರ್ವರ್ತನೆ ದುರ್ನಡತೆ ಮತ್ತು ಅಶಿಸ್ತನ್ನು ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24–9–2008ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದ ದಿನಾಂಕ: 24–7–2007 ರಿಂದ 31–01–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಸಿ.ಎ.ಆರ್., ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–9–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ

ಮಾರ್ಪಡಿಸಲು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 15 ಪೊಸಿಅ 2010 ಬೆಂಗಳೂರು, ದಿನಾಂಕ 29-12-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ,

ಶ್ರೀ ಸುರೇಶ್ ಮೂರ್ತಿ, ಮಾಜಿ ಎ.ಪಿ.ಸಿ., ಸಿ.ಎ.ಆರ್. (ಉತ್ತರ) ಬೆಂಗಳೂರು ನಗರ, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 24-9-2008ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ **"ಕಡ್ಡಾಯ ನಿವೃತ್ತಿ"** ಗೊಳಿಸಿ ಆದೇಶಿಸಿದೆ. ದಿ: 24-7-2007 ರಿಂದ 31-01-2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 151

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕಂದಾಯ ಇಲಾಖೆಯ ವಿಶೇಷ ಕಾರ್ಯದರ್ಶಿ (ಭೂಮಿ) ಹುದ್ದೆಯನ್ನು ಪುನರ್ ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 2 ಸಸಿವಿ 2003 ದಿನಾಂಕ 11-6-2003

2) ಕಡತ ಸಂಖ್ಯೆ ಸಿಆಸುಇ 721 ಸೇಅಸೆ 2010

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯ ಅಪರ ಕಾರ್ಯದರ್ಶಿ (ಭೂಸುಧಾರಣೆ) ಹುದ್ದೆಯನ್ನು ವಿಶೇಷ ಕಾರ್ಯದರ್ಶಿ (ಭೂಸುಧಾರಣೆ) ಎಂದು ಉನ್ನತೀಕರಿಸಿ, ಈ ಹುದ್ದೆಯನ್ನು ವಿಶೇಷ ಕಾರ್ಯದರ್ಶಿ (ಭೂಮಿ) ಎಂದು ಪದನಾಮೀಕರಿಸಲಾಗಿದೆ. ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಡತದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ ಮತ್ತು ನಗರ ಸ್ವತ್ತುಗಳ ನೋಂದಣಿ) ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಎಂದು ಪುನರ್ ಪದನಾಮಗೊಳಿಸುವಂತೆ ಕೋರಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 628 ಸಅಸೇ 2010 ಬೆಂಗಳೂರು, ದಿನಾಂಕ 31ನೇ ಡಿಸೆಂಬರ್ 2010.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕಂದಾಯ ಇಲಾಖೆಯ ವಿಶೇಷ ಕಾರ್ಯದರ್ಶಿ (ಭೂಮಿ) ಹುದ್ದೆಯ ಪದನಾಮವನ್ನು ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಮರುಪದನಾಮೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ (ಸೇವೆಗಳು-3)

ಪಿ.ಆರ್. 152

## ENERGY SECRETARIAT

**Sub:** Transfer of 4.00 MW mini hydel power project in favour of M/s Venika Renewable Energy Private Limited-reg.

**Read:** 1. Government Order No: EN 624 NCE 2009 dated: 16.09.2010

2. Letter No: KRED/06/SH-681/Ganalu MHS/2010/3375 dated: 13.12.2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded to implement 4.00 MW mini hydel power project across Simsha river near Ganalu village, Malavalli Taluk, Mandya, District to M/s. Venika Green Power Private Limited.

In the letter read at (2) above, the Managing Director, Karnataka Renewable Energy Development Limited, Bangalore has recommended to the Government for transfer of 4.00 MW mini hydel power project in favour of M/s. Venika Renewable Energy Private Limited from M/s Venika Green Power Private Limited. The Registrar Companies, Karnataka vide CIN No: U40102KA2008PTC047713 dated: 08-09-2008 has issued a Certificate of Incorporation to M/s Venika Renewable Energy Private Limited.

The proposal has been examined in detail and issued following Orders.

**Government Order No. EN 486 NCE 2010. Bangalore Dated 29.12.2010**

Government accords approval for transfer of 4.00 MW mini hydel power project in favour of M/s Venika Renewable Energy Private Limited from M/s Venika Green Power Private Limited. across Simsha river near Ganalu village, Malavalli Taluk, Mandya District.

The Government reserves the right to Cancel/modify this Order.

The other terms and conditions of the Government Order read at (1) above shall IPSO FACTO applicable.

By Order and in the name of the Governor of Karnataka
**Suresh B. Krishnappanavar**
Under Secretary to Government
Energy Department

P.R. 153

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ
## ಸೇರ್ಪಡೆ

**ಸಂಖ್ಯೆ: ಮಮಇ 109 ಪಿಎಚ್‌ಪಿ 2010 ಬೆಂಗಳೂರು, ದಿನಾಂಕ: 29–12–2010**

ಸರ್ಕಾರಿ ಆದೇಶ ಸಂಖ್ಯೆ: ಮಮಇ 109 ಪಿಎಚ್‌ಪಿ 2010, ದಿನಾಂಕ: 14–12–2010 ಆದೇಶ ಭಾಗದ 2ನೇ ಕಂಡಿಕೆಯಲ್ಲಿ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

"ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ರಾಜ್ಯ ಸಹಾಯಧನದ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ರೂಪಿಸಿರುವ ಯೋಜನೆಯ ರೂಪುರೇಷೆ ಮತ್ತು ಯೋಜನೆಗೆ ಸಂಬಂಧಿಸಿದಂತೆ ನಿಗದಿತ ಅರ್ಜಿ ಮತ್ತು ಇತರೆ ವಿವರಣೆಗಳನ್ನು ನಮೂನೆಯ ಅಡಕಗಳನ್ನು ಅನುಬಂಧ–1 ರಿಂದ 6ರವರೆಗೆ ತೋರಿಸಲಾಗಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಪಿ.ಆರ್. 155 ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ
## ತಿದ್ದುಪಡಿ

**ಸಂಖ್ಯೆ: ಸಿಐ/164/ಎಸ್‌ಪಿಐ/2010 ಬೆಂಗಳೂರು, ದಿನಾಂಕ 31–12–2010**

**ವಿಷಯ :** ಕರ್ನಾಟಕ ರಾಜ್ಯದಲ್ಲಿ "ಆಹಾರ ಸಂಸ್ಕರಣಾ ಘಟಕಗಳಿಗೆ ಬಂಡವಾಳ ಹೂಡಿಕೆ" ಯೋಜನೆಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಐ 164 ಎಸ್‌ಪಿಐ 2010, ದಿನಾಂಕ 21–09–2010.

2) ಅಪರ ನಿರ್ದೇಶಕರು (ಎಂಎಸ್‌ಎಂಇ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಎಂಎಸ್‌ಎಂಇ/ಎಸ್1/ಆಹಾರ ಸಂಸ್ಕರಣೆ/26/2010–11, ದಿನಾಂಕ 14.12.2010.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಸರ್ಕಾರಿ ಆದೇಶ ಸಂಖ್ಯೆ: ಸಿಐ 164 ಎಸ್‌ಪಿಐ 2010, ದಿನಾಂಕ: 21.09.2010 ಆದೇಶದ ಭಾಗದಲ್ಲಿನ ಕಂಡಿಕೆ 2ರಲ್ಲಿ ಲೆಕ್ಕ ಶೀರ್ಷಿಕೆ "4851–00–102–015" ನ್ನು "4851–00–102–015" (ಯೋಜನೆ) ಎಂದು ಹಾಗೂ ವಾಕ್ಯದ ಕೊನೆಯಲ್ಲಿ (Objective code 211) ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ.ಶ್ರೀನಿವಾಸ ದೀಕ್ಷಿತ್**

ಪಿ.ಆರ್. 156 ಪೀಠಾಧಿಕಾರಿ (ತಾಂತ್ರಿಕ ಕೋಶ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಇಎಂ 96, ದಿನಾಂಕ: 19–02–1997.
2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 03 ಸಸಿವಿ 1998, ದಿನಾಂಕ: 24–04–1998.
3. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 34 ಸಸಿವಿ 1998, ದಿನಾಂಕ: 24–09–1998.
4. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 10 ಸಸಿವಿ 1999, ದಿನಾಂಕ: 03–04–1999.
5. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 37 ಸಸಿವಿ 2001, ದಿನಾಂಕ: 23–10–2001.
6. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 101 ಸಸಿವಿ 2005, ದಿನಾಂಕ: 10–01–2006.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 705 ಸಆಸೇ 2007, ದಿನಾಂಕ 01.04.2008.
8. ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 65 ಯೋಮೇಘ 2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1 ಮತ್ತು 2) ರಲ್ಲಿ ಓದಲಾಗಿರುವ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಈ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅ) ಜಂಟಿ/ಉಪ ಕಾರ್ಯದರ್ಶಿ | 01 |
| | ಆ) ಶೀಘ್ರಲಿಪಿಗಾರರು | 01 |
| | ಇ) ಕಿರಿಯ ಸಹಾಯಕರು | 01 |

| | | |
|---|---|---|
| 2. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 01 |
| 3. | ಸಂಶೋಧನಾಧಿಕಾರಿ/ಸ್ಟ್ಯಾಟಿಸ್ಟಿಕಲ್ ಅನಾಲಿಸ್ಟ್ (ಸಾಂಸ್ಥಿಕ ಹಾಗೂ ಸಾಂಖ್ಯಿಕ ಇಲಾಖೆಯ ಗಣಕ ಯಂತ್ರ ಜ್ಞಾನವನ್ನು ಹೊಂದಿರುವ ಅಧಿಕಾರಿಯನ್ನು ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 01 |
| 4. | ಪ್ರೋಗ್ರಾಮರ್ | 01 |
| 5. | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 01 |
| 6. | ಸಂಶೋಧನಾ ಮತ್ತು ಪದನಿಮಿತ್ತ ಅಪರ ನಿರ್ದೇಶಕರು/ ಸಹ ನಿರ್ದೇಶಕರು/ಉಪ ನಿರ್ದೇಶಕರು ಯೋಜನಾ ಮೇಲ್ವಿಚಾರಣಾ ಘಟಕ (ವೇತನ ಶ್ರೇಣಿ ರಹಿತ ಹುದ್ದೆ) | 02 |
| 7. | ಶಾಖಾಧಿಕಾರಿ | 01 |
| 8. | ಹಿರಿಯ ಸಹಾಯಕರು | 01 |
| 9. | ಶೀಘ್ರಲಿಪಿಗಾರರು | 01 |
| 10. | ಬೆರಳಚ್ಚುಗಾರರು | 01 |
| 11. | ಟೆಕ್ನಿಷಿಯನ್ (ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 01 |

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಒಂದು ವಾಹನ ಚಾಲಕರ ಹುದ್ದೆಯನ್ನು ದಿನಾಂಕ: 19.02.1997ರ ಆದೇಶದಲ್ಲಿ ಸೃಜಿಸಲಾದ ಸಿಬ್ಬಂದಿ ವರ್ಗದ ಅವಧಿಯೊಂದಿಗೆ ಚಾಲಕರ ಹುದ್ದೆಯ ಅವಧಿ ಕೊನೆಗೊಳ್ಳುವ ಷರತ್ತಿನೊಂದಿಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ: 19.02.1999 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಗೆ ಕೊನೆಗೊಳ್ಳುವಂತೆ ಒಂದು ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳ ಚಾಲ್ತಿಯ ಅವಧಿಗೆ, ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ, ಹಾಗೂ "ಸಂಶೋಧನಾಧಿಕಾರಿ/ಸ್ಟ್ಯಾಟಿಸ್ಟಿಕಲ್ ಅನಾಲಿಸ್ಟ್" ಹುದ್ದೆಯನ್ನು "ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರು" ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಹಿರಿಯ ಸಹಾಯಕರು | 01 |
| 2. | ಸಹಾಯಕ | 01 |
| 3. | ಕಿರಿಯ ಸಹಾಯಕ | 01 |

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಎಲ್ಲಾ ಹುದ್ದೆಗಳನ್ನು ದಿನಾಂಕ: 19.02.2008 ರಿಂದ ಮತ್ತೆ 03 ವರ್ಷದ ಅವಧಿಗೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳ ಅವಧಿಯ ಮುಂದುವರಿಕೆಯು ದಿನಾಂಕ: 18.02.2011 ರಂದು ಮುಕ್ತಾಯವಾಗುವುದರಿಂದ ಸದರಿ ಹುದ್ದೆಗಳನ್ನು ದಿನಾಂಕ: 19.02.2011 ರಿಂದ ಮತ್ತೆ 03 ವರ್ಷಗಳ ಅವಧಿಗೆ ಮುಂದುವರೆಸುವಂತೆ ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಕಡತದಲ್ಲಿ ಆರ್ಥಿಕ ಇಲಾಖೆಯು ಕೋರಿದೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 591 ಸಅಸೇ 2010 ಬೆಂಗಳೂರು, ದಿನಾಂಕ 06–01–2011**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 19.02.2011 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಜಂಟಿ/ಉಪ ಕಾರ್ಯದರ್ಶಿ | 01 |
| 2. | ಶೀಘ್ರಲಿಪಿಗಾರರು | 01 |
| 3. | ಕಿರಿಯ ಸಹಾಯಕರು | 01 |
| 4. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯ ಪತ್ರ ಇಲಾಖೆಯಿಂದ ನಿಯೋಜಿಸುವುದು) (ವೇತನ ಶ್ರೇಣಿ ರಹಿತ ಹುದ್ದೆ) | 01 |
| 5. | ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |

| | | |
|---|---|---|
| 6. | ಪ್ರೋಗ್ರಾಮರ್ | 01 |
| 7. | ಶೀಘ್ರಲಿಪಿಗಾರರು/ಡಾಟಾ ಎಂಟ್ರಿ ಆಪರೇಟರ್ | 01 |
| 8. | ಸಂಶೋಧನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು/ಸಹ ನಿರ್ದೇಶಕರು/ಉಪ ನಿರ್ದೇಶಕರು<br>ಯೋಜನಾ ಮೇಲ್ವಿಚಾರಣಾ ಘಟಕ<br>(ವೇತನ ಶ್ರೇಣಿ ರಹಿತ ಹುದ್ದೆ) | 02 |
| 9. | ಶಾಖಾಧಿಕಾರಿ | 01 |
| 10. | ಹಿರಿಯ ಸಹಾಯಕರು | 01 |
| 11. | ಶೀಘ್ರಲಿಪಿಗಾರರು | 01 |
| 12. | ಬೆರಳಚ್ಚುಗಾರರು | 01 |
| 13. | ಟೆಕ್ನಿಷಿಯನ್<br>(ಗ್ರೂಪ್–ಡಿ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ) | 01 |
| 14. | ವಾಹನ ಚಾಲಕ | 01 |
| 15. | ಡಾಟಾ ಎಂಟ್ರಿ ಆಪರೇಟರ್ | 01 |
| 16. | ಹಿರಿಯ ಸಹಾಯಕರು | 01 |
| 17. | ಸಹಾಯಕ | 01 |
| 18. | ಕಿರಿಯ ಸಹಾಯಕ | 01 |
| | ಒಟ್ಟು | 19 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–3)

ಪಿ.ಆರ್. 158

## PERSONNEL AND ADMINISTRATIVE REFORMS SECRETARIAT

**Sub:** Terms and conditions of contract appointment of Prof. S. Madeswaran, Special Officer (Evaluation), Planning, Programme Monitoring and Statistics Department.

**Read:** Notification No. DPAR 442 SGO 2010. Dt. 29-9-2010.

**Preamble:**

In the Notification dated 29-9-2010 read above, Prof. S. Madeswaran, Professor, ISEC has been appointed on contract basis as Special Officer (Evaluation), Planning, Programme Monitoring and Statistics Department.

The Terms and Conditions of Contract appointment of Prof. S. Madeswaran, Special Officer (Evaluation), Planning, Programme Monitoring & Statistics Department issued in the Annexure of the read Notification has been modified as follows.

**Government Order No. DPAR 442 SGO 2010. Bangalore Dated 11th January 2011**

The terms and conditions for contract appointment of Prof. S. Madeswaran, Special Officer (Evaluation), Planning, Programme Monitoring and Statistics Department are indicated hereunder.

**1) PERIOD OF CONTRACT :**

The period of contract of Prof. S. Madeswaran, Special Officer (Evaluation), Planning, Programme Monitoring and Statistics Department is for a period of two years or so long as the service of Prof. S. Madeswaran are required in the said office whichever is earlier.

**2) THE COMMENCEMENT AND TERMINATION OF CONTRACT :**

The contract will commence on 14-10-2010 and ends on the date on which he hands over charge in State Government.

**3) PAY AND OTHER ALLOWANCES :**

During the period of contract he shall entitled to pay including DA/HRA/CCA admissible to him in his parent organization.

**4) LEAVE RULES :**

He will be governed by the leave rules applicable to him in the parent organization.

**5) P.F. CONTRIBUTIONS :**

12% of Basic Pay shall be deducted from the salary of the employee every month and remitted to ISEC together with employers contribution at 12% of Basic Pay by the State Government.

**6) GRATUITY FUND CONTRIBUTION :**

Government shall pay contribution towards service gratuity at the rate of 8.33% of the annual remuneration.

**7) LIC PENSION ANNUITY SCHEMES :**

10% contribution by the State Government (employer) and 5% subscription by the employee.

**8) GROUP INSURANCE SCHEME :**

` 280/- shall be payable by the employee towards the Group Insurance Scheme.

**9) MEDICAL CONCESSION :**

The Officer shall entitled to the Medical attendance as per the Karnataka Government Servants (Medical Attendance) Rules 1963.

10) He shall perform the functions of Special Officer and attend to all work enstrusted to him from time to time by the said Officer.

11) He shall perform his duties diligently and he shall maintain strict secrecy in respect of official information which he comes to know in the course of his duties.

12) He shall be liable to reimburse to Government all the losses which the Government may sustain due to mis-conduct of any sort on his part.

This order issues with the concurrence of Finance Department vide Note No. FD 1417: Services-1 2010, dated : 15-9-2010.

By Order and in the name of the Governor of Karnataka
**A.R. Vijayananda Sharma**
Under Secretary to Government
Department of Personnel and Administrative
Reforms (Services-3)

P.R. 159

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 270 ಎಸ್‌ಜಿಓ 85, ದಿನಾಂಕ: 31.01.1986.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 660 ಸಅಸೇ 2009, ದಿನಾಂಕ: 18.01.2010.

3. ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 4/ವಿಕೋಆ/2010, ದಿನಾಂಕ: 08.12.2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಹಾಗೂ ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಈ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.01.2010 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 01 |
| 2. | ಹಿರಿಯ ಸಹಾಯಕ | 01 |
| 3. | ಸಹಾಯಕ | 01 |
| 4. | ಕಿರಿಯ ಸಹಾಯಕ | 01 |
| 5. | ಬೆರಳಚ್ಚುಗಾರ | 01 |
| 6. | ದಲಾಯತ್ | 01 |
| 7. | ವಾಹನ ಚಾಲಕ | 01 |
| | ಒಟ್ಟು | 07 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದಲ್ಲಿರುವ 07 ಹುದ್ದೆಗಳನ್ನು ದಿನಾಂಕ: 01.01.2011 ರಿಂದ ಮತ್ತೆ ಒಂದು ವರ್ಷದ ಅವಧಿಯವರೆಗೆ ಮುಂದುವರೆಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 616 ಸಅಸೇ 2010 ಬೆಂಗಳೂರು, ದಿನಾಂಕ 04–01–2011**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.01.2011 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 01 |
| 2. | ಹಿರಿಯ ಸಹಾಯಕ | 01 |
| 3. | ಸಹಾಯಕ | 01 |
| 4. | ಕಿರಿಯ ಸಹಾಯಕ | 01 |
| 5. | ಬೆರಳಚ್ಚುಗಾರ | 01 |

| | | |
|---|---|---|
| 6. | ದಲಾಯತ್ | 01 |
| 7. | ವಾಹನ ಚಾಲಕ | 01 |
| | ಒಟ್ಟು | 07 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–3)

ಪಿ.ಆರ್. 160

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ. & ಎ. ಎಸ್, ನಿಯೋಜನೆ ಮೇಲೆ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ), ಆರ್ಥಿಕ ಇಲಾಖೆ ಇವರ ನಿಯೋಜನಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ: ಸಿಆಸುಇ 330 ಎಸ್‌ಜಿಓ 2007, ದಿನಾಂಕ 09–10–2007.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 330 ಎಸ್‌ಜಿಓ 2007, ದಿನಾಂಕ 16.04.2008.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 811 ಸಅಸೇ 2008, ದಿನಾಂಕ: 20–10–2008.
4) ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 97 ಸಮಯ 2009.
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 403 ಸಅಸೇ 2009, ದಿನಾಂಕ: 21–01–2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀಮತಿ ಅನಿತಾ ಬಾಲಕೃಷ್ಣ ಐ.ಎ. & ಎ.ಎಸ್, ಅವರನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಈ ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಒಂದು ವರ್ಷದ ಅವಧಿಗೆ ನೇಮಿಸಲಾಗಿತ್ತು. ಅದರಂತೆ ಅವರು ದಿನಾಂಕ: 14–10–2007 ರಂದು ಸದರಿ ಹುದ್ದೆಯಲ್ಲಿ ಅಧಿಕಾರ ವಹಿಸಿಕೊಂಡರು. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ಅಧಿಕಾರಿಯ ನಿಯೋಜನಾ ಅವಧಿಯನ್ನು ದಿನಾಂಕ: 15–10–2009 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು. ಆರ್ಥಿಕ ಇಲಾಖೆಯು ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ. & ಎ.ಎಸ್, ಅವರ ಸೇವೆಯು ಇನ್ನೂ ಆರ್ಥಿಕ ಇಲಾಖೆಗೆ ಅವಶ್ಯಕವಾಗಿರುವುದರಿಂದ ಅವರ ನಿಯೋಜನಾ ಅವಧಿಯನ್ನು ದಿನಾಂಕ 15–10–2010 ರಿಂದ 31–12–2010 ರವರೆಗೆ ಮುಂದುವರಿಸಲು ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 629 ಸಅಸೇ 2010 ಬೆಂಗಳೂರು, ದಿನಾಂಕ 4ನೇ ಜನವರಿ 2011**

ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ. & ಎ.ಎಸ್, ನಿಯೋಜನೆ ಮೇಲೆ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ), ಆರ್ಥಿಕ ಇಲಾಖೆ ಇವರ ನಿಯೋಜನಾ ಅವಧಿಯನ್ನು ದಿನಾಂಕ: 15–10–2010 ರಿಂದ 31–12–2010ರವರೆಗೆ ಮುಂದುವರಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 330 ಎಸ್‌ಜಿಓ 2007, ದಿನಾಂಕ 16–04–2008 ರಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳು ಮುಂದುವರೆದ ಅವಧಿಗೂ ಅನ್ವಯವಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3)

ಪಿ.ಆರ್. 161

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕಂದಾಯ ಇಲಾಖೆಯ ವಿಶೇಷ ಕಾರ್ಯದರ್ಶಿ (ಭೂಮಿ) ಹುದ್ದೆಯನ್ನು ಪುನರ್‌ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2003 ದಿನಾಂಕ: 11–06–2003.
2. ಕಡತ ಸಂಖ್ಯೆ ಸಿಆಸುಇ 721 ಸೆಅಸೆ 2010

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಂದಾಯ ಇಲಾಖೆಯ ಅಪರ ಕಾರ್ಯದರ್ಶಿ (ಭೂಸುಧಾರಣೆ) ಹುದ್ದೆಯನ್ನು ವಿಶೇಷ ಕಾರ್ಯದರ್ಶಿ (ಭೂಸುಧಾರಣೆ) ಎಂದು ಉನ್ನತೀಕರಿಸಿ, ಈ ಹುದ್ದೆಯನ್ನು ವಿಶೇಷ ಕಾರ್ಯದರ್ಶಿ (ಭೂಮಿ) ಎಂದು ಪದನಾಮೀಕರಿಸಲಾಗಿದೆ. ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಡತದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ ಮತ್ತು ನಗರ ಸ್ವತ್ತುಗಳ ನೋಂದಣಿ) ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಎಂದು ಪುನರ್ ಪದನಾಮಗೊಳಿಸುವಂತೆ ಕೋರಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 628 ಸಅಸೇ 2010 ಬೆಂಗಳೂರು, ದಿನಾಂಕ 31ನೇ ಡಿಸೆಂಬರ್ 2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕಂದಾಯ ಇಲಾಖೆಯ ವಿಶೇಷ ಕಾರ್ಯದರ್ಶಿ (ಭೂಮಿ) ಹುದ್ದೆಯ ಪದನಾಮವನ್ನು ಕಾರ್ಯದರ್ಶಿ (ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್) ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಮರುಪದನಾಮೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಪಿ.ಆರ್. 162 ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು. ಇಲಾಖೆ (ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎ.ಪಿ. ಕೆರಪ್ಪನವರ್ ಕೆ.ಎ.ಎಸ್. ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟಿ ವಿರುದ್ಧ ಇಲಾಖಾ ವಿಚಾರಣೆ- ಆರೋಪಮುಕ್ತಗೊಳಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂ: ಸಿಆಸುಇ 66 ಎಸ್ಇಎನ್ 2002 ದಿ: 24-07-07.
2. ವಿಚಾರಣಾಧಿಕಾರಿಗಳ ವರದಿ ದಿ: 25-09-10

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ ಹಿಡಕಲ್ ಡ್ಯಾಮ್ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನಿನ ಪೈಕಿ ಹುಕ್ಕೇರಿ ತಾಲ್ಲೂಕಿನ ಜಿನರಾಳ ಗ್ರಾಮದ ಸ.ನಂ. 58/1, 58/2 ಮತ್ತು 59/2 ರ ಸಂಬಂಧ ಬೆಳಗಾವಿ ಜಿಲ್ಲಾ ನ್ಯಾಯಾಲಯ ನೀಡಿರುವ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ವಿಳಂಬ ಮಾಡಿರುವ ಹಾಗೂ ದಿ: 20-03-92 ರಿಂದ ದಿ: 07-07-2000 ರವರೆಗೆ ಹಿಡಕಲ್ ಡ್ಯಾಂ ಯೋಜನೆಯಲ್ಲಿ ವಿಶೇಷ ಭೂಸ್ವಾಧೀನಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದ ಕೆ.ಎ.ಎಸ್. ಅಧಿಕಾರಿಗಳಾದ ಶ್ರೀ ಎ.ಪಿ.ಕೆರಪ್ಪನವರ್, ಶ್ರೀ ಬಿ.ಎಂ. ಹಲಗತ್ತಿ, ಶ್ರೀ ಎಂ.ವಿ. ಗೊಂಗಡಶೆಟ್ಟಿ, ಶ್ರೀ ಎನ್.ಎಚ್. ಸುಳೇಬಾವಿ ಮತ್ತು ಶ್ರೀ ಎಂ.ಎಸ್. ವಾಲೀಕರ್ ಹಾಗೂ ಪ್ರಥಮ ದರ್ಜೆ ಸಹಾಯಕರುಗಳಾದ ಶ್ರೀ ಜೆ.ಬಿ. ಜಹೆಜ ಮತ್ತು ಶ್ರೀ ಎ.ಎಸ್.ಹೊಸಮನಿ ಇವರುಗಳ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ಎಂ.ಎಸ್.ಎ ಸಂ. 26/2 ರಲ್ಲಿ ಉಚ್ಚ ನ್ಯಾಯಾಲಯವು ದಿ: 13-03-02 ರಲ್ಲಿ ನೀಡಿರುವ ತೀರ್ಪಿನಲ್ಲಿ ಆದೇಶಿಸಿರುತ್ತದೆ. ಸದರಿ ಆಪಾದಿತ ಅಧಿಕಾರಿಗಳ ವಿರುದ್ಧ ಸಕಾಲದಲ್ಲಿ ಶಿಸ್ತು ಕ್ರಮವನ್ನು ಕೈಗೊಳ್ಳದಿರುವುದಕ್ಕೆ ನ್ಯಾಯಾಲಯ ಸ್ವಯಂ ಪ್ರೇರಿತವಾಗಿ ನ್ಯಾಯಾಲಯ ನಿಂದನೆಯನ್ನು ಕೈಗೆತ್ತಿಕೊಂಡಿದ್ದರಿಂದ ನ್ಯಾಯಾಲಯ ನಿಂದನೆಯನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಮೇಲ್ಕಂಡ ಅಧಿಕಾರಿ/ನೌಕರರ ವಿರುದ್ಧದ ಆರೋಪದ ಸಂಬಂಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂ.(1)ರಲ್ಲಿನ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ.(2)ರಲ್ಲಿ ಓದಲಾದ ದಿ: 25-09-2010 ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಮೇಲ್ಕಂಡ ಅಧಿಕಾರಿ/ನೌಕರರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿಯನ್ನು ನೀಡಿರುತ್ತಾರೆ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಗಿ ವಿಚಾರಣಾಧಿಕಾರಿಗಳು ಸಾಕ್ಷಿದಾರರನ್ನಾಗಿ ಹೆಸರಿಸಲಾಗಿದ್ದ ಅಡ್ವೋಕೇಟ್ ಜನರಲ್ ರವರ ಕಛೇರಿಯ ಸಹಾಯಕ ಆಡಳಿತ ಅಧಿಕಾರಿಯವರನ್ನು ವಿಚಾರಣೆಗೆ ಕರೆಯಿಸಿ ಅವರಿಂದ ಹೇಳಿಕೆಯನ್ನು ಪಡೆದಿರುತ್ತಾರೆ. ಇವರ ಹೇಳಿಕೆಯಂತೆ ಮೇಲ್ಮನವಿ ಸಲ್ಲಿಸಲು ಹೆಚ್ಚುವರಿ ಜಿಲ್ಲಾ ನ್ಯಾಯಾಲಯವು ನೀಡಿದ್ದ ದೃಡೀಕೃತ ಪ್ರತಿ ಮತ್ತು ಡಿಕ್ರಿಯ ಪ್ರತಿಗಳನ್ನು ಸಲ್ಲಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳಿಗೆ ಸಾಮಾನ್ಯ ರೀತಿಯ ಅಂಚೆ ಮೂಲಕ ಕಳುಹಿಸಲಾಗಿದ್ದು, ಇಂತಹ ಪದ್ಧತಿಯು ತಮ್ಮ ಕಛೇರಿಯಲ್ಲಿ ಸಾಮಾನ್ಯವಾಗಿರುವುದಾಗಿ ಸಾಕ್ಷಿದಾರರು ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ಸಾಕ್ಷಿಗಳ ಹೇಳಿಕೆಯಂತೆ ಸದರಿ ಪತ್ರವು ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಸ್ವೀಕೃತವಾಗಿರುವ ಬಗ್ಗೆಯಾಗಲಿ ಅಥವಾ ಅಡ್ವೋಕೇಟ್ ಜನರಲ್‌ರವರ ಕಛೇರಿಯಿಂದ ಈ ಪತ್ರಗಳು ರವಾನೆಯಾದ ಬಗ್ಗೆಯಾಗಲೀ ಯಾವುದೇ ಮಾಹಿತಿ ಇಲ್ಲದ ಕಾರಣ ಹಾಗೂ ಒಂದು ವೇಳೆ ಈ ಪತ್ರವನ್ನು ಸಾಮಾನ್ಯ ಅಂಚೆ ಮುಖಾಂತರ ಕಳುಹಿಸಲಾಗಿದೆ ಎಂದು ಭಾವಿಸಿದರೂ ಈ ಪತ್ರವು ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಸ್ವೀಕರಿಸಿರುವ ಬಗ್ಗೆ ರುಜುವಾತಾಗದ ಕಾರಣ ಆಪಾದಿತರು ಅಡ್ವೋಕೇಟ್ ಜನರಲ್‌ರವರ ಕಛೇರಿಯಿಂದ ಮೇಲ್ಮನವಿ ಸಲ್ಲಿಸುವ ಕುರಿತು ಮಾಹಿತಿ ಪಡೆದಿದ್ದರೆಂದು ಭಾವಿಸುವುದು ಸಮಂಜಸವಲ್ಲವೆಂದು ಹಾಗೂ ಅಡ್ವೋಕೇಟ್ ಜನರಲ್‌ರವರ ಪತ್ರವು ಆಪಾದಿತರಿಗೆ ತಲುಪದೇ ಇರುವಾಗ ಅವರು ಮೇಲ್ಮನವಿ ಸಲ್ಲಿಸಲು ವಿಫಲರಾಗಿರುವರೆಂದು ಭಾವಿಸುವುದು ಸೂಕ್ತವಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಅದರಂತೆ ಅಡ್ವೋಕೇಟ್ ಜನರಲ್ ರವರ ಕಛೇರಿಯಿಂದ ಮೇಲ್ಮನವಿ ಸಲ್ಲಿಸುವ ಕುರಿತು ಆಪಾದಿತರಿಗೆ ನಿರ್ದೇಶನಗಳು ಸ್ವೀಕೃತಗೊಂಡಿರುವ ಅಂಶವನ್ನು ರುಜುವಾತು ಪಡಿಸುವಲ್ಲಿ ವಿಫಲಗೊಂಡಿರುವುದರಿಂದ ಈ ಲೋಪಗಳಿಗೆ ಆಪಾದಿತರನ್ನು ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲವೆಂದು ತಿಳಿಸುತ್ತಾ ಈ ಸಂಬಂಧವಾಗಿ ಆಪಾದಿತರ ವಿರುದ್ಧ ಮಾಡಲಾದ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪದೇ ಇರಲು ಯಾವುದೇ ಸಕಾರಣಗಳು ಇರುವುದಿಲ್ಲವಾದ್ದರಿಂದ ವಿಚಾರಣಾ ವರದಿಯನ್ನು ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 161 ಕೆಇವಿ 2007 ಬೆಂಗಳೂರು, ದಿನಾಂಕ 03ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕೆ.ಎ.ಎಸ್ ಅಧಿಕಾರಿಗಳಾದ ಶ್ರೀ ಎ.ಪಿ. ಕೆರಪ್ಪನವರ್, ಶ್ರೀ ಬಿ.ಎಂ. ಹಲಗತ್ತಿ, ಶ್ರೀ ಎಂ.ವಿ. ಗೊಂಗಡಶೆಟ್ಟಿ, ಶ್ರೀ ಎನ್.ಎಚ್. ಸುಳೇಬಾವಿ ಮತ್ತು ಶ್ರೀ ಎಂ.ಎಸ್. ವಾಲಿಕರ್ ಮತ್ತು ಪ್ರಥಮ ದರ್ಜೆ ಸಹಾಯಕರುಗಳಾದ ಶ್ರೀ ಜೆ.ಬಿ. ಜಹೆಜ ಮತ್ತು ಶ್ರೀ ಎ.ಎಸ್. ಹೊಸಮನಿ ಇವರುಗಳನ್ನು ದಿ: 17-08-2002 ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಪಿ.ಆರ್. 163 ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಮಹಮದ್ ಸಲ್ಲಾವುದ್ದೀನ್, ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನಾ ಆದೇಶವನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂ: ಸಿಆಸುಇ 126 ಎಸ್‌ಇಎನ್ 91 ದಿ: 21–05–1997

**ಪ್ರಸ್ತಾವನೆ:**

ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ಅಧಿಕಾರಿ ಇವರು ಗುಲ್ಬರ್ಗಾ ಜಿಲ್ಲೆ ಜೀವರ್ಗಿ ತಾಲ್ಲೂಕಿನ ತಹಸೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ತಾಲ್ಲೂಕಿನ ಮಳ್ಳಿ ಮಂಡಲ ಪಂಚಾಯಿತಿ ಪ್ರಧಾನರು ಹಾಗೂ ಉಪ ಪ್ರಧಾನರ ಚುನಾವಣೆಯಲ್ಲಿ ನಿರ್ಲಕ್ಷ್ಯತನದಿಂದ ವರ್ತಿಸಿರುವ ಇತ್ಯಾದಿ ಒಟ್ಟು ಆರು ಆರೋಪಗಳಿಗಾಗಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆದಿದ್ದು ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂ:(1)ರ ಆದೇಶದಲ್ಲಿ ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 11 ಮತ್ತು 11–ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿ ನಿಯಮ–8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರಿಗೆ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with cumulaive effect)ತಡೆ ಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯ ಆದೇಶದ ವಿರುದ್ಧ ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂ: 4445/1997 ಅನ್ನು ದಾಖಲಿಸಿ ತಮ್ಮ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ವಿಧಿಸಲಾಗಿದ್ದ ದಂಡನೆಯನ್ನು ರದ್ದುಗೊಳಿಸುವಂತೆ ಕೋರಿದ್ದರು.

ಈ ಸಂಬಂಧವಾಗಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿ: 24–07–08 ರಂದು ಈ ಕೆಳಕಂಡಂತೆ ಆದೇಶವನ್ನು ನೀಡಿರುತ್ತದೆ.

> Admittedly, in the present case, no such evidence was recorded by the inquiring authority. Though the applicant had remained absent for many of the dates that does not dispense with the necessity of evidence being recorded by the inquiring authority. In that view of the matter, we find the proceedings vitiated due to that major lacuna. Consequently the finding of the disciplinary authority and the penalty will have to be set aside.
>
> For the above said reasons, we allow the application and quash the Government order bearing No. ಸಿಆಸುಇ 126 ಎಸಿಎನ್ 97 Dt.. 21–05–1997 and the penalty imposed on the applicant. Whether at this length of time denovo enquiry may be held against the applicant is left to the discretion of the Disciplinary Authority.

ನ್ಯಾಯಾಲಯದ ತೀರ್ಪಿನ ಹಿನ್ನಲೆಯಲ್ಲಿ ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ರವರು ಕೆ.ಎ.ಟಿ.ಯಲ್ಲಿ ದಾಖಲಿಸಿರುವ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯಾಮಂಡಳಿಯು ತನ್ನ ದಿ: 24–07–2008 ರ ಆದೇಶದಲ್ಲಿ ಅರ್ಜಿಯನ್ನು ಪುರಸ್ಕರಿಸಿ ವಿಚಾರಣಾ ವರದಿಯನ್ನು ಅನೂರ್ಜಿತಗೊಳಿಸಿ ಇಷ್ಟು ವರ್ಷಗಳ ನಂತರ ಮರು ವಿಚಾರಣೆ ಮಾಡಬಹುದೇ ಇತ್ಯಾದಿಗಳ ಬಗ್ಗೆ ನಿರ್ಣಯಿಸಿ ಕ್ರಮ ಕೈಗೊಳ್ಳುವುದನ್ನು ಶಿಸ್ತು ಪ್ರಾಧಿಕಾರದ ವಿವೇಚನೆಗೆ ಬಿಟ್ಟಿರುತ್ತದೆ. ಪ್ರಕರಣವನ್ನು ಪರಿಶೀಲಿಸಲಾಗಿ ಈ ಪ್ರಕರಣವು 1990 ರಲ್ಲಿ ನಡೆದಿದ್ದು, ಈಗಾಗಲೇ 20 ವರ್ಷಗಳು ಗತಿಸಿದ್ದು ಸಂಬಂಧಪಟ್ಟ ಸಾಕ್ಷಿದಾರರ ವಿಚಾರಣೆ ನಡೆಸಿ ದಾಖಲೆಗಳನ್ನು ಗುರುತಿಸಿ ಆಪಾದನೆಗಳನ್ನು ರುಜುವಾತು ಪಡಿಸುವುದು ಕಷ್ಟಸಾಧ್ಯವಾಗುತ್ತದೆ. ಆದುದರಿಂದ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಇವರಿಗೆ ವಿಧಿಸಿದ ದಂಡನೆಯ ಆದೇಶವನ್ನು ರದ್ದುಗೊಳಿಸಿ ತಡೆಹಿಡಿದಿರುವ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಲು ನಿರ್ಣಯಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 88 ಎಸ್‌ಇಎನ್ 1997 (ಸಿಆಸುಇ 209 ಕೆಇವಿ 2007) ಬೆಂಗಳೂರು, ದಿನಾಂಕ 03ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಮಹಮದ್ ಸಲ್ಲಾವುದ್ದೀನ್ ಕೆ.ಎ.ಎಸ್. ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಸರ್ಕಾರಿ ಆದೇಶ ಸಂ:ಸಿಆಸುಇ 126 ಎಸ್‌ಇಎನ್ 97 ದಿ: 21–05–1997 ರಲ್ಲಿ ಅವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆ ಹಿಡಿದು ವಿಧಿಸಲಾಗಿದ್ದ ದಂಡನೆಯನ್ನು ರದ್ದುಗೊಳಿಸಲಾಗಿದೆ. ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅವರ ಮೇಲಿನ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 164

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಮಹಮದ್ ಗೌಸ್ ಕೆ.ಎ.ಎಸ್. (ನಿ) ಅಧಿಕಾರಿ ಹಾಗೂ ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂ: ಸಿಆಸುಇ 107 ಎಸ್ಇಎನ್ 94 ದಿ: 13–09–2005

2. ವಿಚಾರಣಾಧಿಕಾರಿಗಳ ವರದಿ ದಿ: 09–01–2008

3. ಎರಡನೇ ಕಾರಣ ಕೇಳುವ ನೋಟೀಸ್ ದಿ: 10–03–2008.

4. ಎರಡನೇ ಕಾರಣ ಕೇಳುವ ನೋಟೀಸಿಗೆ ಉತ್ತರ ದಿ: 27–03–08.

5. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ದಿ: 08–12–2010

**ಪ್ರಸ್ತಾವನೆ:**

ಶ್ರೀ ಮಹಮದ್ ಗೌಸ್ ಕೆ.ಎ.ಎಸ್. (ನಿ) ಇವರು ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮೈಸೂರು ಜಿಲ್ಲೆ ಯಳಂದೂರು ತಾಲ್ಲೂಕು ಕೆ. ದೇವರಹಳ್ಳಿ ಗ್ರಾಮದ ಸರ್ವೆ ನಂ. 4,5,6 ಮತ್ತು ಚಾಮರಾಜನಗರ ತಾಲ್ಲೂಕು ಸಂತೇಮರಹಳ್ಳಿ ಹೋಬಳಿ ಮೇಲ್ಮಾಳ ಗ್ರಾಮದ ಸರ್ವೆ ನಂ. 248 ಮತ್ತು ತಿಮ್ಮೇಗೌಡನ ಪಾಳ್ಯ ಗ್ರಾಮದ ಸರ್ವೆ ನಂ 55 ರ ಪ್ರದೇಶವನ್ನು ರಕ್ಷಿತ ಅರಣ್ಯ ಪ್ರದೇಶವಾಗಿ ಘೋಷಿಸಲು ಮೀಸಲಿಟ್ಟ ಸರ್ಕಾರಕ್ಕೆ ಸೇರಿದ ಬೆಲೆ ಬಾಳುವ ಜಮೀನುಗಳನ್ನು ಅಕ್ರಮವಾಗಿ ಖಾಸಗಿ ವ್ಯಕ್ತಿಗಳಿಗೆ ನೀಡಿರುವ ಆರೋಪದ ಸಂಬಂಧ ಇವರ ವಿರುದ್ಧ ವಿಚಾರಣೆ ನಡೆಸಲು ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ದಿ: 13–09–2005ರ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ(2) ರಲ್ಲಿ ಓದಲಾದ ದಿ: 09–01–2008 ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಮಹಮದ್ ಗೌಸ್, ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿದೆಯೆಂದು ವರದಿಯನ್ನು ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ವಿಚಾರಣಾ ಸಮಯದಲ್ಲಿ ಹಾಜರು ಪಡಿಸಿದ ದಾಖಲೆಗಳು ಮತ್ತು ವಿಚಾರಣೆಗೆ ಒಳಪಡಿಸಿದ ಸಾಕ್ಷಿಗಳ ಹೇಳಿಕೆಗಳ ಆಧಾರದ ಮೇಲೆ ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ ಶ್ರೀ ಮಹಮದ್ ಗೌಸ್ ಇವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುತ್ತದೆಂದು ಅದರಂತೆ ಆರೋಪಿತ ಅಧಿಕಾರಿಗೆ ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವಿಚಾರಣಾ ವರದಿಯೊಂದಿಗೆ ಎರಡನೇ ಕಾರಣ ಕೇಳುವ ನೋಟಿಸನ್ನು ಜಾರಿಗೊಳಿಸಲಾಗಿತ್ತು. ಆಪಾದಿತರು ಎರಡನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿರುವ ಲಿಖಿತ ಅಹವಾಲಿನಲ್ಲಿ ಅವರನ್ನು ಆರೋಪಮುಕ್ತಗೊಳಿಸಲು ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಂದಿಲ್ಲದಿರುವುದರಿಂದ ಆಪಾದಿತರು ವಿಚಾರಣಾ ವರದಿಯನ್ನು ಔಪಚಾರಿಕವಾಗಿ ವಿರೋಧಿಸುತ್ತಿದ್ದಾರೆಂದು ಸರ್ಕಾರವು ನಿರ್ಣಯಿಸಿದೆ.

ಮೇಲ್ಕಂಡಂತೆ ಆರೋಪಿತರಾದ ಶ್ರೀ ಮಹಮದ್ ಗೌಸ್ ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ, ಇವರ ನಿವೃತ್ತಿ ವೇತನದಲ್ಲಿ ಮಾಹೆಯಾನ ರೂ. 100/– ಗಳನ್ನು 1 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಸಕಾರವು ನಿರ್ಧರಿಸಿದ್ದು, ದಂಡನೆ ವಿಧಿಸುವ ಈ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಓದಲಾದ ಕ್ರಮ ಸಂ. (5) ರ ಪತ್ರದಲ್ಲಿ ಸಹಮತಿ ನೀಡಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 107 ಎಸ್ಇಎನ್ 94 (ಸಿಆಸುಇ 203 ಕೆಇವಿ 2007) ಬೆಂಗಳೂರು, ದಿನಾಂಕ 03ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಮಹಮದ್ ಗೌಸ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರಿಗೆ ಇವರ ನಿವೃತ್ತಿ ವೇತನದಲ್ಲಿ ಮಾಹೆಯಾನ ರೂ. 100/– ಗಳನ್ನು 1 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 165

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಇವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂಖ್ಯೆ ಸಿಆಸುಇ 17 ಸೇಇವಿ 2009 ದಿನಾಂಕ 20–02–2010.

2. ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಅಧೀನ ಕಾರ್ಯದರ್ಶಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 08–11–2010.

**ಪ್ರಸ್ತಾವನೆ:**

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಇವರು ನಿಯಮಾನುಸಾರ ಸರ್ಕಾರಕ್ಕೆ ನಿಗದಿತವಾಗಿ ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸದಿರುವ ಹಾಗೂ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿಯಿಲ್ಲದೆ ಮೋಟಾರ್ ಕಾರನ್ನು ಖರೀದಿಸಿರುವುದಕ್ಕೆ ಸಂಬಂಧಿಸಿದಂತೆ ಹಾಗೂ ಸದರಿ ಮೋಟಾರ್ ಕಾರ್ ಸ್ವಂತ ವಾಹನವಾಗಿದ್ದರೂ ಅದರ ಮೇಲೆ Karnataka Government Secretariat ಎಂದು ನಿಯಮಬಾಹಿರವಾಗಿ ಬಣ್ಣದಲ್ಲಿ ಬರೆಸಿಕೊಂಡಿರುವ ಆರೋಪಗಳಿಗೆ ಸಂಬಂಧಿಸಿದಂತೆ, ಸದರಿಯವರಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 12 ರನ್ವಯ ಜಾರಿ ಮಾಡಿ ವಿವರಣೆ ಕೋರಲಾಗಿತ್ತು.

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಅಧೀನ ಕಾರ್ಯದರ್ಶಿ ರವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 09-11-2010 ರ ಹೇಳಿಕೆಯಲ್ಲಿ, ತಾವು ದಿನಾಂಕ 25-2-2010 ರಂದೇ ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು) ಇವರಿಗೆ ಖುದ್ದಾಗಿ ವಿವರಣೆ ನೀಡಿರುತ್ತೇನೆಂದು ತಿಳಿಸಿ, ಪ್ರತಿ ಸಲ್ಲಿಸಿದ್ದಾರೆ. ಆದರೆ ಅಧಿಕಾರಿಯು ತಿಳಿಸಿರುವ 25-02-2010 ರ ವಿವರಣೆಯು ಸ್ವೀಕೃತವಾಗಿರುವುದಿಲ್ಲ. ಶ್ರೀ ಎಲ್.ಎಸ್. ಚಂದ್ರಶೇಖರರಾವ್ ಇವರು ಸಲ್ಲಿಸಿರುವ ಹೇಳಿಕೆಯಲ್ಲಿ ತಾವು ಸ್ಥಿರಾಸ್ತಿ ಮತ್ತು ಚರಾಸ್ತಿ ಪಟ್ಟಿಗಳನ್ನು ಆಯಾ ಸಾಲುಗಳಲ್ಲಿ ಸಲ್ಲಿಸುತ್ತಾ ಬಂದಿದ್ದು, ಅವುಗಳ ಪ್ರತಿಗಳು ಹಾಗೂ ಇತರೆ ದಾಖಲಾತಿಗಳು ಕಳೆದು ಹೋಗಿದ್ದು, ಅವುಗಳ ಪ್ರತಿಯನ್ನು ಈಗ ಒದಗಿಸಲು ಸಾಧ್ಯವಾಗಿರುವುದಿಲ್ಲ. ಆದಕಾರಣ, 2009-10ರ ಆಸ್ತಿ ವಿವರ ಪಟ್ಟಿಯನ್ನು ನೀಡುವ ಸಂದರ್ಭದಲ್ಲಿ ಎಲ್ಲಾ ವಿವರಗಳನ್ನು ಒದಗಿಸುವುದಾಗಿಯೂ ಹಾಗೂ ದ್ವಿಚಕ್ರ ವಾಹನ ಬಳಸಬಾರದೆಂಬ ವೈದ್ಯರ ಸಲಹೆ ಮೇರೆಗೆ 2009ರ ಫೆಬ್ರವರಿಯಲ್ಲಿ ಬ್ಯಾಂಕಿನಿಂದ ಸಾಲ ಪಡೆದು ಕಾರನ್ನು ಖರೀದಿ ಮಾಡಿದ್ದು, ಅದರ ವಿವರಗಳನ್ನು ಸಹಾ ಸದರಿ ಸಾಲಿನ ಆಸ್ತಿ ವಿವರ ಪಟ್ಟಿಯನ್ನು ನೀಡುವ ಸಂದರ್ಭದಲ್ಲಿ ನಮೂದಿಸುವನಿದ್ದೇನೆಂದೂ ಹಾಗೂ ತಾವು ರಜೆ ಮೇಲಿದ್ದ ಸಮಯದಲ್ಲಿ ಕಾರ್ ಬಂದಿದ್ದು, ಗ್ಯಾರೇಜ್‌ನವರು ನಂಬರ್ ಪ್ಲೇಟ್ ಮಾಡುವಾಗ ತಮ್ಮ ವಿಸಿಟಿಂಗ್ ಕಾರ್ಡಿನಲ್ಲಿದ್ದ ಕರ್ನಾಟಕ ಸರ್ಕಾರದ ಸಚಿವಾಲಯ ಎಂಬುದನ್ನು ಗಮನಿಸಿ ಅದರಂತೆ ಸ್ಟಿಕರ್ ಮಾಡಿ ಹಾಕಿದ್ದು, ರಜೆಯಿಂದ ಹಿಂದಿರುಗಿ ಬಂದ ನಂತರ ಸದರಿ ಸ್ಟಿಕರ್‌ನ್ನು ತೆಗೆದು ಹಾಕಿರುತ್ತೇನೆಂದು ತಿಳಿಸಿ, ಈ ಬಾರಿ ಕ್ಷಮೆ ತೋರಿ ಆಗಿರುವ ತಪ್ಪನ್ನು ಮನ್ನಿಸಬೇಕೆಂದು ಹಾಗೂ ಇನ್ನು ಮುಂದೆ ಈ ರೀತಿ ಆಗದಂತೆ ಎಚ್ಚರಿಕೆ ವಹಿಸುತ್ತೇನೆಂದು ತಿಳಿಸಿರುತ್ತಾರೆ.

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಅಧೀನ ಕಾರ್ಯದರ್ಶಿ, ಇವರು ತಮ್ಮ ವಿವರಣೆಯಲ್ಲಿ ತಿಳಿಸಿರುವಂತೆ ಆಯಾ ಸಾಲಿನಲ್ಲಿ ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸಿರುವುದಕ್ಕೆ ಯಾವುದೇ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ. ಇವರಿಗೆ ಹಲವಾರು ಬಾರಿ ನೋಟೀಸ್ ನೀಡಿ ಸೂಚಿಸಿದ್ದರೂ ಈವರೆಗೂ ಅವರು 1999-2000 ರಿಂದ 2009-10ನೇ ಸಾಲುಗಳ (2001-02ನೇ ಸಾಲನ್ನು ಹೊರತುಪಡಿಸಿ) ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸಿರುವುದಿಲ್ಲ ಹಾಗೂ ಕಾರನ್ನು ಖರೀದಿ ಮಾಡಿರುವ ಬಗ್ಗೆ ಸಹಾ ಸಕ್ಷಮ ಪ್ರಾಧಿಕಾರಕ್ಕೆ ವರದಿ ಮಾಡಿರುವುದಿಲ್ಲ. ಇದರಿಂದಾಗಿ ಅವರ ವಿರುದ್ಧ ಹೊರಿಸಲಾದ ನಿಗದಿತವಾಗಿ ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸದಿರುವ ಆರೋಪ ಮತ್ತು ಸಕ್ಷಮ ಪ್ರಾಧಿಕಾರದ ಅನುಮತಿಯಿಲ್ಲದೆ ಕಾರನ್ನು ಖರೀದಿಸಿರುವ ಆರೋಪಗಳು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆಂದು ಪರಿಗಣಿಸಿ, ಸರ್ಕಾರವು ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರಿಗೆ ಕೆಳಕಂಡಂತೆ ದಂಡನೆಯನ್ನು ವಿಧಿಸಲು ತೀರ್ಮಾನಿಸಿ, ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸೇಇವಿ 2009 ಬೆಂಗಳೂರು, ದಿನಾಂಕ 01-01-2011**

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಇವರಿಗೆ ಮೇಲ್ಕಂಡಂತೆ ಸಾಬೀತಾದ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii)ರ ಅನ್ವಯ ಒಂದು ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು-3)

ಪಿ.ಆರ್. 166

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಕಿತ್ತೂರು ರಾಣಿ ಚೆನ್ನಮ್ಮ, ಸ್ತ್ರೀಶಕ್ತಿ ಪುರಸ್ಕಾರ ಪ್ರಶಸ್ತಿ ಹಾಗೂ ಡಾ॥ ದುರ್ಗಾಬಾಯಿ ದೇಶಮುಖ್ ಪ್ರಶಸ್ತಿ ನೀಡಲು ಸಮಿತಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ 07-01-2003 ರ ಸರ್ಕಾರದ ಆದೇಶ ಸಂಖ್ಯೆ; ಮಮಇ 169 ಮಮಅ 2002.
2) ದಿನಾಂಕ 15-02-2007 ರ ಸರ್ಕಾರದ ಆದೇಶ ಸಂಖ್ಯೆ; ಮಮಇ 35 ಮಮಅ 2006.
3) ದಿನಾಂಕ: 06.01.2011 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಪ್ರಸ್ತಾವನೆ ಸಂಖ್ಯೆ: ಮಮಇ:ಮಕವಿ:1:2010-11.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮಹಿಳಾ ಅಭಿವೃದ್ಧಿ ಕ್ಷೇತ್ರದಲ್ಲಿ ಹಾಗೂ ಸಾಮಾಜಿಕ ಅಪರಾಧ ಹಾಗೂ ಇತರ ಅನಿಷ್ಠಗಳಿಂದ ಮಹಿಳೆಯುರನ್ನು ರಕ್ಷಿಸುವ ಕಾರ್ಯದಲ್ಲಿ ತೊಡಗಿರುವ ಮಹಿಳೆಯರ ಪ್ರಯತ್ನಗಳನ್ನು ಗುರುತಿಸಿ ಪ್ರೋತ್ಸಾಹಿಸುವ ಸಲುವಾಗಿ, ಮಹಿಳೆಯರ ಹಿತಾಶಕ್ತಿಗಾಗಿ ಉತ್ತಮ ಸೇವೆ ಸಲ್ಲಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳು ಹಾಗೂ ಸಮಾಜ ಕಾರ್ಯಕರ್ತೆಯರಿಗಾಗಿ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ, ಕೇಂದ್ರ ಸರ್ಕಾರದ ಸ್ತ್ರೀಶಕ್ತಿ ಪುರಸ್ಕಾರ ಪ್ರಶಸ್ತಿ ಹಾಗೂ ಕೇಂದ್ರ ಸಮಾಜ ಕಲ್ಯಾಣ ಸಲಹಾ ಮಂಡಳಿಯ ಡಾ॥ ದುರ್ಗಾಬಾಯಿ ದೇಶಮುಖ್ ಪ್ರಶಸ್ತಿಗಳನ್ನು ನೀಡಲು ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ಅಧಿಕಾರಿಗಳು ಮತ್ತು ಅಧಿಕಾರೇತರ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮೂರು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ರಚಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ದಿನಾಂಕ 07.01.2003 ರ ಸರ್ಕಾರಿ ಆದೇಶದಲ್ಲಿ ರಚಿಸಲಾದ ಸಮಿತಿಯನ್ನು ಪುನರ್‌ರಚಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಏಕ ಕಡತ ಪ್ರಸ್ತಾವನೆಯಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ, ಸ್ತ್ರೀಶಕ್ತಿ ಪುರಸ್ಕಾರ ಪ್ರಶಸ್ತಿ ಹಾಗೂ ಡಾ॥ ದುರ್ಗಾಬಾಯಿ ದೇಶ್‌ಮುಖ್ ಪ್ರಶಸ್ತಿ ನೀಡುವ ಸಂಬಂಧ ಆಯ್ಕೆಗಾಗಿ ಇರುವ ಸಮಿತಿ ರಚನೆ ಆದೇಶ ಹೊರಡಿಸಿ 3 ವರ್ಷದ ಅವಧಿ ಈಗಾಗಲೇ ಮುಕ್ತಾಯವಾಗಿರುವುದರಿಂದ, ಸದರಿ ಸಮಿತಿಯನ್ನು ಪುನರ್ ರಚಿಸಿ ಆದೇಶ ಹೊರಡಿಸುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 272 ಮಮಅ 2010, ಬೆಂಗಳೂರು, ದಿನಾಂಕ : 07-01-2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ದಿನಾಂಕ: 15.02.2007 ರ ಸರ್ಕಾರಿ ಆದೇಶದಲ್ಲಿ ರಚಿಸಲಾದ ಸಮಿತಿಯನ್ನು ಮತ್ತೆ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 14.02.2011 ರವರೆಗೆ ಮುಂದುವರೆಸಿ ಆದೇಶ ಹೊರಡಿಸಿದೆ.

1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರು – ಅಧ್ಯಕ್ಷರು
2. ಅಧ್ಯಕ್ಷರು, ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಳಿ – ಸದಸ್ಯರು
3. ಅಧ್ಯಕ್ಷರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ – ಸದಸ್ಯರು
4. ಅಧ್ಯಕ್ಷರು, ಕರ್ನಾಟಕ ರಾಜ್ಯ ಮಹಿಳಾ ಆಯೋಗ – ಸದಸ್ಯರು
5. ಶ್ರೀಮತಿ ಸರೋಜ ತುಳಸಿದಾಸಪ್ಪ – ಸದಸ್ಯರು
6. ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ – ಸದಸ್ಯರು
7. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ – ಸದಸ್ಯ-ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 167

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಕ್ಕಳ ಪಾಲನಾ ಸಂಸ್ಥೆಗಳನ್ನು ನೋಂದಣಿ ಮಾಡಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ನೋಂದಣಿ ಪ್ರಾಧಿಕಾರವೆಂದು ಗುರುತಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ ಮಮಅಇ/ಪಿಡಿಎಂ/ದತ್ತು-46/10-11, ದಿನಾಂಕ: 10-12-2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಪಾಲನೆ ಮತ್ತು ರಕ್ಷಣೆ ಅವಶ್ಯವಿರುವ ಮಕ್ಕಳಿಗಾಗಿ ರಾಜ್ಯದಲ್ಲಿರುವ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ ಎಲ್ಲಾ ಸಂಸ್ಥೆಗಳನ್ನು ನೋಂದಾಯಿಸುವ ಬಗ್ಗೆ ಬಾಲನ್ಯಾಯ ಕಾಯಿದೆ 2000 ತಿದ್ದುಪಡಿ ಕಾಯಿದೆ 2006ರ ಸೆಕ್ಷನ್ 34 (3) ಹಾಗೂ ಕರ್ನಾಟಕ ಬಾಲನ್ಯಾಯ ನಿಯಮಗಳು 2010 ನಿಯಮ 78 (2) (ಎ)ರಲ್ಲಿ ಇಲಾಖಾ ನಿರ್ದೇಶಕರನ್ನು ನೋಂದಣಿ ಪ್ರಾಧಿಕಾರವೆಂದು ತಿಳಿಸಿರುವುದರಿಂದ ಜೆ.ಜೆ.ಕಾಯಿದೆಯನ್ನು ಅನುಷ್ಠಾನಗೊಳಿಸುತ್ತಿರುವ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಜೆ.ಜೆ. ಕಾಯ್ದೆಯಡಿ ಮಕ್ಕಳ ಸಂಸ್ಥೆಗಳನ್ನು ನೋಂದಣಿ ಮಾಡುವ ಅಧಿಕಾರಿಯೆಂದು ಗುರುತಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 248 ಮಭಾಬ 2010, ಬೆಂಗಳೂರು, ದಿನಾಂಕ : 05-01-2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಪಾಲನೆ ಮತ್ತು ರಕ್ಷಣೆಯ ಅವಶ್ಯವಿರುವ ಮಕ್ಕಳಿಗಾಗಿ ರಾಜ್ಯದಲ್ಲಿರುವ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ ಎಲ್ಲಾ ಸಂಸ್ಥೆಗಳನ್ನು ಬಾಲನ್ಯಾಯ ಕಾಯ್ದೆಯಡಿ ನೋಂದಣಿ ಮಾಡಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ನೋಂದಣಿ ಪ್ರಾಧಿಕಾರವೆಂದು ಗುರುತಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ-1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 168

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗನವಾಡಿ ಕಾರ್ಯಕರ್ತೆಯರ ಆಯ್ಕೆಯ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ: 3-11-2007 ರ ಸರ್ಕಾರದ ಆದೇಶ ಸಂಖ್ಯೆ: ಮಮಇ 18 ಐಸಿಡಿ 2007.
2. ದಿನಾಂಕ: 24-10-2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಪ್ರಸ್ತಾವನೆ ಸಂಖ್ಯೆ : ಡಿಡಬ್ಲ್ಯೂಸಿ : ಐಸಿಡಿ : ಎಎನ್‌ಜಿ-1/204/2009-10.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸಬೇಕಾದ ಅಂಗನವಾಡಿ ಕಾರ್ಯಕರ್ತೆಯರು ಹೊಂದಿರಬೇಕಾದ ಅರ್ಹತೆ ಮತ್ತು ಆಯ್ಕೆ ಸಮಿತಿಗಳು ಅನುಸರಿಸಬೇಕಾದ ವಿಧಾನಗಳನ್ನು ನಿಗದಿಪಡಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಆಯ್ಕೆ ಮಾಡಲು ಸರ್ಕಾರದ ಆದೇಶ/ಸುತ್ತೋಲೆ ಮತ್ತು ನಿರ್ದೇಶನಾಲಯದ ಸುತ್ತೋಲೆಗಳ ಮೂಲಕ ಮಾರ್ಗಸೂಚಿಗಳನ್ನು ನೀಡಲಾಗಿದ್ದರೂ, ಹಲವಾರು ವಿಷಯಗಳಿಗೆ

ಸಂಬಂಧಿಸಿದಂತೆ ಜಿಲ್ಲೆ/ತಾಲ್ಲೂಕುಗಳಿಂದ ಪದೇಪದೇ ಸ್ಪಷ್ಟೀಕರಣ ಕೋರಿ ಪತ್ರಗಳು ಸ್ವೀಕೃತವಾಗುತ್ತಿರುವುದರಿಂದ ಪರಿಷ್ಕೃತ ಮಾರ್ಗಸೂಚಿಯನ್ನು ಹೊರಡಿಸುವ ಅಗತ್ಯವಿದ್ದು, ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 18 ಐಸಿಡಿ 2007, ಬೆಂಗಳೂರು, ದಿನಾಂಕ : 5–1–2011.**

ಮೇಲೆ ವಿವರಿಸಿದ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಆಯ್ಕೆ ಮಾಡಲು ಮಾರ್ಗಸೂಚಿ ಹಾಗೂ ಅರ್ಹತೆಯ ಮಾನದಂಡಗಳನ್ನು ಅನುಬಂಧದಲ್ಲಿರುವಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಎಸ್.ಎನ್. ಕೃಷ್ಣಕುಮಾರ್
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಅನುಬಂಧ

**(ಆದೇಶ ಸಂಖ್ಯೆ : ಮಮಇ 18 ಐಸಿಡಿ 2007, ಬೆಂಗಳೂರು, ದಿನಾಂಕ : 5–1–2011)**

**ಅಂಗನವಾಡಿ ಕಾರ್ಯಕರ್ತೆಯರನ್ನು ಆಯ್ಕೆಮಾಡಲು ಮಾರ್ಗ ಸೂಚಿಗಳು ಮತ್ತು ಅರ್ಹತೆ ಹಾಗೂ ಮಾನ ದಂಡಗಳು**

1. ಅಂಗನವಾಡಿ ಕಾರ್ಯಕರ್ತೆಯು ಸ್ಥಳೀಯ ಮಹಿಳೆಯಾಗಿರಬೇಕು. 18 ರಿಂದ 44 ವರ್ಷಗಳ ವಯೋಮಿತಿಯೊಳಗಿರತಕ್ಕದ್ದು. ಅಭ್ಯರ್ಥಿಗಳು ಸ್ಥಳೀಯರಾಗಿರಬೇಕಾಗಿದ್ದು, ಸಂಬಂಧಪಟ್ಟ ತಹಸೀಲ್ದಾರರಿಂದ ಪಡೆದ ಮೂಲ ವಾಸಸ್ಥಳ ದೃಢೀಕರಣ ಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು.

2. ಅ) ಅಂಗನವಾಡಿ ಕಾರ್ಯಕರ್ತೆಯ ಆಯ್ಕೆಗಾಗಿ ಸಂಬಂಧಿಸಿದ ಅಂಗನವಾಡಿ ಕೇಂದ್ರದ ಗ್ರಾಮದವರಿಂದ ಮಾತ್ರ ಅರ್ಜಿಗಳನ್ನು ಕರೆಯಬೇಕು. ಗ್ರಾಮದ ವ್ಯಾಪ್ತಿ ದೊಡ್ಡದಿದ್ದಾಗ ಹೊಸದಾಗಿ ಕೇಂದ್ರ ಪ್ರಾರಂಭಿಸುವ ಕೇಂದ್ರದ ಪ್ರದೇಶ ವ್ಯಾಪ್ತಿಯನ್ನು ಗುರುತಿಸಿಕೊಳ್ಳಬೇಕು (demarcation of area) ಆ ಪ್ರದೇಶದ ಜನಸಂಖ್ಯೆಗೆ ಸೀಮಿತಗೊಳಿಸಿ ಅರ್ಜಿಗಳನ್ನು ಆಹ್ವಾನಿಸಬೇಕು. ಈ ಬಗ್ಗೆ ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸತಕ್ಕದ್ದು. ಪ್ರಕಟಣೆಯನ್ನು ಗ್ರಾಮದ ಪ್ರಾಥಮಿಕ ಶಾಲಾ ಹಾಗೂ ಅಂಗನವಾಡಿ ಕಟ್ಟಡಗಳ ಮೇಲೆ ಹಾಗೂ ಗ್ರಾಮ ಪಂಚಾಯತ್ ಕಛೇರಿಯ ಸೂಚನಾ ಫಲಕದ ಮೇಲೆ ಪ್ರದರ್ಶಿಸತಕ್ಕದ್ದು.

ಆ) ಪ್ರಕಟಣೆ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗೆ ಅರ್ಜಿ ಸಲ್ಲಿಸುವ ಕಾಲಾವಧಿಯನ್ನು ನಿಗದಿಪಡಿಸಿರತಕ್ಕದ್ದು. ಪ್ರಕಟಣೆ ಹೊರಡಿಸುವ ಮುನ್ನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪ್ರಕಟಣೆಗೆ ಸಮಿತಿಯ ಅಧ್ಯಕ್ಷರಾದ ಜಿಲ್ಲಾ ಉಪನಿರ್ದೇಶಕರ ಅನುಮೋದನೆಯನ್ನು ಪಡೆದು ನಂತರ ಪ್ರಕಟಿಸಬೇಕು ಹಾಗೂ ಪ್ರಕಟಣೆಯ ಪ್ರತಿಯನ್ನು ಆಯ್ಕೆ ಸಮಿತಿಯ ಎಲ್ಲಾ ಸದಸ್ಯರಿಗೂ ಕಳುಹಿಸತಕ್ಕದ್ದು.

ಇ) ಪ್ರಕಟಣೆಯನ್ನು ಸ್ಪಷ್ಟವಾಗಿ ನಿಖರವಾಗಿ ಹೊರಡಿಸತಕ್ಕದ್ದು. ಹುದ್ದೆ ಖಾಲಿಯಿರುವ ಸ್ಥಳ, ಆ ಹುದ್ದೆ ಜನಸಂಖ್ಯೆ ಆಧಾರದಲ್ಲಿ ಯಾವ ವರ್ಗಕ್ಕೆ ಮೀಸಲಾಗಿದೆ ಎಂಬ ಬಗ್ಗೆ ತಿಳಿಸಿರಬೇಕು ಹಾಗೂ ಅರ್ಜಿಗಳನ್ನು ಯಾವ ನಮೂನೆಯಲ್ಲಿ ಸಲ್ಲಿಸಬೇಕು, ಯಾವ ದಾಖಲೆಗಳನ್ನು ಒದಗಿಸಬೇಕು ಎಂಬ ಬಗ್ಗೆ ಸ್ಪಷ್ಟವಾಗಿ ಪ್ರಕಟಣೆಯಲ್ಲಿ ತಿಳಿಸತಕ್ಕದ್ದು. ಅರ್ಜಿಗಳನ್ನು ಯೋಜನಾ ಕಛೇರಿಯಿಂದ ವಿತರಿಸುವ ಅಗತ್ಯವಿಲ್ಲ. ಅರ್ಜಿಯೊಡನೆ ಸಲ್ಲಿಸಬೇಕಾದ ಪ್ರಮಾಣ ಪತ್ರ/ದಾಖಲೆಗಳ ಕುರಿತಂತೆ ಒಂದು ಚೆಕ್ ಲಿಸ್ಟ್ ತಯಾರಿಸಿ ಅರ್ಜಿ ಸಲ್ಲಿಸಲು ಅಭ್ಯರ್ಥಿಗಳು ಬಂದಾಗ ಅರ್ಜಿಗಳನ್ನು ಅವರ ಎದುರಿನಲ್ಲಿಯೇ ಪರಿಶೀಲಿಸಿ ಯಾವ ದಾಖಲೆಗಳಿವೆಯೆಂದು ದೃಢಪಡಿಸಿಕೊಂಡು ಅವರು ನೀಡುವ ಪ್ರಮಾಣ ಪತ್ರಗಳನ್ನು ಅದರಲ್ಲಿ ನಮೂದಿಸಿ ಅರ್ಜಿಯನ್ನು ಸ್ವೀಕರಿಸುವ ಅಧಿಕಾರಿಯು ಚೆಕ್ ಲಿಸ್ಟ್‌ನ ಒಂದು ಪ್ರತಿಯನ್ನು ಅಭ್ಯರ್ಥಿಗೆ ಅರ್ಜಿ ಸಲ್ಲಿಸುವ ಸಮಯದಲ್ಲಿ ನೀಡತಕ್ಕದ್ದು.

ಈ) ಅಂಗನವಾಡಿ ಕಾರ್ಯಕರ್ತೆಯರು ಗೌರವ ಕಾರ್ಯಕರ್ತೆಯರಾಗಿದ್ದು, ಮೀಸಲಾತಿ ತತ್ವಗಳು ಅನ್ವಯಿಸುವುದಿಲ್ಲವಾದ್ದರಿಂದ ಹೊಸದಾಗಿ ಕೇಂದ್ರ ಪ್ರಾರಂಭಿಸುವ ಯಾವುದೇ ಗ್ರಾಮದ ಜನಸಂಖ್ಯೆಯು ಶೇಕಡ 40 ಕ್ಕಿಂತ ಹೆಚ್ಚಾದ ಪರಿಶಿಷ್ಟ ಜಾತಿ/ಪಂಗಡದವರು ಒಳಗೊಂಡಿದ್ದಲ್ಲಿ ಆ ವರ್ಗಕ್ಕೆ ಸೇರಿದವರನ್ನು ಮಾತ್ರ ಅಂಗನವಾಡಿ ಕಾರ್ಯಕರ್ತೆಯರಾಗಿ ಆಯ್ಕೆ ಮಾಡಲಾಗುವುದೆಂದು ಅರ್ಜಿ ಆಹ್ವಾನಿಸುವ ಪ್ರಕಟಣೆಯಲ್ಲಿ ಕಡ್ಡಾಯವಾಗಿ ಸೂಚಿಸಬೇಕು ಹಾಗೂ ಅಂತಹವರನ್ನು ವಿದ್ಯಾರ್ಹತೆ ಮತ್ತು ಇತರ ಅರ್ಹತೆಯ ಮೇರೆಗೆ ಆಯ್ಕೆ ಮಾಡತಕ್ಕದ್ದು.

ಉ) ಒಂದು ಗ್ರಾಮದಲ್ಲಿ ಈಗಾಗಲೇ ಅಂಗನವಾಡಿ ಕೇಂದ್ರವಿದ್ದು ಪುನಃ ಬೇಡಿಕೆಗೆ ಅನುಸಾರವಾಗಿ ಹೊಸ ಕೇಂದ್ರವನ್ನು ಪ್ರಾರಂಭಿಸುತ್ತಿದ್ದಲ್ಲಿ, ಹೊಸ ಕೇಂದ್ರ ಪ್ರಾರಂಭಿಸುವ ಪ್ರದೇಶದ (ವ್ಯಾಪ್ತಿಯ) ಜನಸಂಖ್ಯೆಯಲ್ಲಿ ಶೇಕಡ 40ಕ್ಕಿಂತ ಹೆಚ್ಚು ಜನಸಂಖ್ಯೆ ಪರಿಶಿಷ್ಟ ಜಾತಿ/ವರ್ಗದವರಿದ್ದಲ್ಲಿ ಅಥವಾ ಶೇಕಡ 25ಕ್ಕಿಂತ ಹೆಚ್ಚು ಅಲ್ಪಸಂಖ್ಯಾತ ಜನಸಂಖ್ಯೆ ಒಳಗೊಂಡಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಸದರಿ ವರ್ಗದವರಿಗೆ ಕಾರ್ಯಕರ್ತೆ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿ ಆ ವರ್ಗದವರನ್ನೆ ಆಯ್ಕೆ ಮಾಡತಕ್ಕದ್ದು.

ಊ) ಅಂಗನವಾಡಿ ಕೇಂದ್ರ ಪ್ರಾರಂಭಿಸುವ ಪ್ರದೇಶದ/ವಾರ್ಡ್/ಕಾಲೋನಿಯ ಒಟ್ಟು ಜನಸಂಖ್ಯೆಯು ಶೇಕಡ 40 ಕ್ಕಿಂತ ಹೆಚ್ಚು ಪರಿಶಿಷ್ಟ ಜಾತಿ, ಶೇಕಡ 40 ಕ್ಕಿಂತ ಹೆಚ್ಚು ಪರಿಶಿಷ್ಟ ವರ್ಗದವರು ಹಾಗೂ ಶೇಕಡ 25 ಕ್ಕಿಂತ ಹೆಚ್ಚು ಅಲ್ಪಸಂಖ್ಯಾತ ವರ್ಗದವರನ್ನು ಒಳಗೊಂಡಿದ್ದ ಸಂದರ್ಭದಲ್ಲಿ ಈ ವರ್ಗದವರ ಪೈಕಿ ಅತೀ ಹೆಚ್ಚು ಜನಸಂಖ್ಯೆಯಿರುವ ವರ್ಗದವರಿಗೆ ಕಾರ್ಯಕರ್ತೆಯ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಬೇಕು. ಪ್ರಕಟಣೆಯಲ್ಲಿ ಸ್ಪಷ್ಟವಾಗಿ ಯಾವ ವರ್ಗದವರಿಗೆ ಹುದ್ದೆಯನ್ನು ನಿಗದಿಪಡಿಸಲಾಗಿದೆಯೆಂದು ಸೂಚಿಸಬೇಕು. ನಿಗದಿಪಡಿಸಿದ ವರ್ಗದವರನ್ನೆ ಆಯ್ಕೆ ಮಾಡಬೇಕು.

ಋ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಅಲ್ಪಸಂಖ್ಯಾತರಿಗೆ ಕಾರ್ಯಕರ್ತೆ ಹುದ್ದೆ ನಿಗದಿಪಡಿಸಿದ ಅಂಗನವಾಡಿ ಕೇಂದ್ರಗಳಲ್ಲಿ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದೇ ಹೋದಲ್ಲಿ ಮರು ಪ್ರಕಟಣೆಯನ್ನು ಹೊರಡಿಸಿ ಪುನಃ ಅರ್ಜಿಗಳನ್ನು ಆಹ್ವಾನಿಸಬೇಕು. ಆಗಲೂ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದೇ ಹೋದ ಪಕ್ಷದಲ್ಲಿ ಪುನಃ ಪ್ರಕಟಣೆ ಹೊರಡಿಸಿ ಇತರೆ ವರ್ಗದವರಿಂದ ಅರ್ಜಿ ಆಹ್ವಾನಿಸಬಹುದಾಗಿದೆ. ಮರು ಪ್ರಕಟಣೆ ಅರ್ಜಿ ಆಹ್ವಾನಕ್ಕಿಂತ ಮುಂಚೆ ಶಿಶು ಅಭಿವೃದ್ಧಿಯೋಜನಾಧಿಕಾರಿಗಳು ಸ್ವತಃ ಗ್ರಾಮಕ್ಕೆ ಭೇಟಿ ನೀಡಿ ಆ ವರ್ಗದ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲವೆಂಬ ಬಗ್ಗೆ ಗ್ರಾಮದ ಸ್ಥಳ ಪರಿಶೀಲನಾ ವರದಿ ಪಡೆದುಕೊಂಡಿರಬೇಕು.

ಎ) ಒಂದು ಗ್ರಾಮದಲ್ಲಿ ಒಂದಕ್ಕಿಂತ ಹೆಚ್ಚು ಅಂಗನವಾಡಿ ಕೇಂದ್ರ ಪ್ರಾರಂಭಿಸುತ್ತಿದ್ದು ಆ ಕೇಂದ್ರಗಳಿಗೆ ಸಂಬಂಧ ಪಟ್ಟ ವಾರ್ಡ್/ಕಾಲೋನಿ/ಜನಸಂಖ್ಯಾ ವ್ಯಾಪ್ತಿಯ ಪ್ರದೇಶದವರಿಂದ ಮಾತ್ರ ಅರ್ಜಿಗಳನ್ನು ಆಹ್ವಾನಿಸಬೇಕು. ಒಂದು ಪಕ್ಷ ಸಂಬಂಧ ಪಟ್ಟ ವಾರ್ಡ್/ಕಾಲೋನಿ/ಪ್ರದೇಶದವರಿಂದ ಅರ್ಜಿಗಳು ಸ್ವೀಕೃತವಾಗದೇ ಹೋದಲ್ಲಿ ಅದೇ ಗ್ರಾಮದ ಬೇರೆ ಕಾಲೋನಿ/ವಾರ್ಡ್‌ನ ಅಭ್ಯರ್ಥಿಗಳ ಅರ್ಹ ಅರ್ಜಿಯನ್ನು ಪರಿಗಣಿಸಬಹುದಾಗಿದೆ. ಒಂದು ಪಕ್ಷ ಅದೇ ಗ್ರಾಮದಲ್ಲಿ ಯಾರಿಂದಲೂ ಅರ್ಜಿಗಳು ಸ್ವೀಕೃತವಾಗದೇ ಇದ್ದಲ್ಲಿ ಮರು ಪ್ರಕಟಣೆ ಹೊರಡಿಸಬೇಕು. ಎರಡನೆಯ ಬಾರಿಯೂ ಸ್ಥಳೀಯರಿಂದ ಅರ್ಜಿ ಸ್ವೀಕೃತವಾಗದೇ ಇದ್ದಲ್ಲಿ ಅತ್ಯಂತ ಸಮೀಪದ ಗ್ರಾಮದ ಅರ್ಹ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಬಹುದಾಗಿದೆ. ಮರು ಪ್ರಕಟಣೆ ಅರ್ಜಿ ಆಹ್ವಾನಕ್ಕಿಂತ ಮುಂಚೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸ್ವತಃ ಗ್ರಾಮಕ್ಕೆ ಭೇಟಿ ನೀಡಿ ಆ ವರ್ಗದ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲವೆಂಬ ಬಗ್ಗೆ ಗ್ರಾಮದ ಸ್ಥಳ ಪರಿಶೀಲನಾ ವರದಿ ಪಡೆದುಕೊಂಡಿರಬೇಕು.

3. ಅ) ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು. ಸದರಿ ವಿದ್ಯಾರ್ಹತೆ ಹೊಂದಿದ ಸ್ಥಳೀಯ ಅಭ್ಯರ್ಥಿ ಲಭ್ಯವಿಲ್ಲದಿದ್ದಲ್ಲಿ, ಎಸ್.ಎಸ್.ಎಲ್.ಸಿ. ಅನುತ್ತೀರ್ಣರಾದ ವಿದ್ಯಾರ್ಹತೆಯನ್ನು ಪರಿಗಣಿಸತಕ್ಕದ್ದು. ಗುಡ್ಡಗಾಡು ಪ್ರದೇಶಗಳಲ್ಲಿ ಹಾಗೂ ಅತೀ ಹಿಂದುಳಿದ ಪ್ರದೇಶಗಳಲ್ಲಿ ಸ್ಥಳೀಯರಾದ ಎಸ್.ಎಸ್.ಎಲ್.ಸಿ. ಉತ್ತೀರ್ಣ/ಅನುತ್ತೀರ್ಣರಾದ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಮಾತ್ರ ಕನಿಷ್ಠ 8ನೇ ತರಗತಿಯಲ್ಲಿ ತೇರ್ಗಡೆಯಾದ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.

ಆ) ಅಭ್ಯರ್ಥಿಗಳು ಹೆಚ್ಚಿನ ವಿದ್ಯಾರ್ಹತೆ ಹೊಂದಿದ್ದಲ್ಲಿ ಪಿ.ಯು.ಸಿ. ವಿದ್ಯಾರ್ಹತೆಗೆ 2 (ಎರಡು) ಬೋನಸ್ ಅಂಕಗಳನ್ನು ನೀಡುವುದು ಹಾಗೂ ಪದವಿ ವಿದ್ಯಾರ್ಹತೆ ಹೊಂದಿದ್ದಲ್ಲಿ 5 ಬೋನಸ್ ಅಂಕ ನೀಡುವುದು. ಅಂದರೆ ಪದವೀಧರರಿಗೆ ಒಟ್ಟು ಏಳು ಬೋನಸ್ ಅಂಕಗಳು (ಪಿ.ಯು.ಸಿ. ಗೆ 2 ಅಂಕ + ಪದವಿಗೆ 5 ಅಂಕ) ನೀಡತಕ್ಕದ್ದು. ಎನ್.ಟಿ.ಸಿ. ತರಬೇತಿ ಪಡೆದವರಿಗೆ 2 ಬೋನಸ್ ಅಂಕ ನೀಡತಕ್ಕದ್ದು. ಉಳಿದ ಯಾವುದೇ ಹೆಚ್ಚಿನ ವಿದ್ಯಾರ್ಹತೆಗೆ ಬೋನಸ್ ಅಂಕ ನೀಡುವ ಅಗತ್ಯವಿರುವುದಿಲ್ಲ.

4. ಅ) ಅಂಗವಿಕಲರು, ಮಾಜಿದೇವದಾಸಿಯರು, ಬಾಲನ್ಯಾಯ ಕಾಯ್ದೆಯಡಿ ಇಲಾಖೆಯ ಸಂಸ್ಥೆಗಳಲ್ಲಿ ಆಶ್ರಯ ಪಡೆದ ಹಾಲಿ ಮತ್ತು ಮಾಜಿ ನಿವಾಸಿಗಳು, ನಿರಾಶ್ರಿತರು, ವಿಚ್ಛೇದಿತ ಮಹಿಳೆಯರು, ಪರಿತ್ಯಕ್ತೆಯರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಹೆಚ್ಚಿನ 5 ಬೋನಸ್ ಅಂಕಗಳಿಗೆ ಅರ್ಹರಾಗಿರುತ್ತಾರೆ. ಪ್ರತಿ ವಿನಾಯಿತಿಗೂ 5 ಬೋನಸ್ ಅಂಕಗಳನ್ನು ನೀಡುವುದು. ಆದರೆ ಯಾವುದೇ ಕಾರಣಕ್ಕೂ ಶೇಕಡಾ 5 (5%) ಅಂಕಗಳೆಂದು ಭಾವಿಸಿ ಶೇಕಡ 5 ಅಂಕ ನೀಡುವಂತಿಲ್ಲ.

ಆ) ಅಂಗನವಾಡಿ ಕಾರ್ಯಕರ್ತೆ ಹುದ್ದೆಗೆ ವಿಧವೆಯರು ಅರ್ಜಿ ಸಲ್ಲಿಸಿದಾಗ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸದೆ ನೇರವಾಗಿ ವಿಧವೆಯರನ್ನೆ ಆಯ್ಕೆ ಮಾಡತಕ್ಕದ್ದು. ಆದರೆ ವಿಧವೆ ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಉತ್ತೀರ್ಣ/ಅನುತ್ತೀರ್ಣರಾಗಿರುವುದು ಕಡ್ಡಾಯವಾಗಿರುತ್ತದೆ ಸ್ಥಳೀಯರು ಮತ್ತು ವಯೋಮಿತಿಯೊಳಗಿರಬೇಕಾದುದು ಸಹ ಕಡ್ಡಾಯ. ಒಂದೇ ಹುದ್ದೆಗೆ ಇಬ್ಬರು ವಿಧವೆಯರು ಅರ್ಜಿ ಸಲ್ಲಿಸಿದ್ದಲ್ಲಿ ಗರಿಷ್ಠ ಅಂಕ ಪಡೆದವರನ್ನು ಆಯ್ಕೆ ಮಾಡಬಹುದಾಗಿದೆ. ವಿಧವೆಯರು ಪ್ರಸ್ತುತ ತಾವು ಎಲ್ಲಿ ವಾಸವಾಗಿರುವುದಾಗಿ ವಾಸಸ್ಥಳ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೋ ಆ ಸ್ಥಳವನ್ನೆ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು. ಅಂದರೆ ಉದಾಹರಣೆಗೆ ವಿಧವೆ ಅಭ್ಯರ್ಥಿಯ ಗಂಡನ ಮನೆಯು ಬೇರೆ ಗ್ರಾಮವಾಗಿದ್ದು, ಪ್ರಸ್ತುತ ಅಂಗನವಾಡಿ ಹುದ್ದೆ ತೆರೆಯುತ್ತಿರುವ ಗ್ರಾಮವು ಆಕೆ ತಾಯಿಯ ಮನೆಯಾಗಿದ್ದು ಆಕೆಯು ತನ್ನ ವಾಸಸ್ಥಳವನ್ನು ಬದಲಾಯಿಸಿಕೊಂಡಿದ್ದು, ತಾಯಿಯ ಮನೆಯಲ್ಲಿಯೇ ವಾಸವಾಗಿರುವುದಾಗಿ ವಾಸಸ್ಥಳ ಪ್ರಮಾಣ ಪತ್ರ ನೀಡಿದ್ದಲ್ಲಿ ಆ ಸ್ಥಳವನ್ನೇ ಆಕೆಯ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

ಇ) ಆದರೆ ಪರಿಶಿಷ್ಟ ಜಾತಿ/ಪಂಗಡ/ಅಲ್ಪಸಂಖ್ಯಾತ ವರ್ಗದವರಿಗೆ ಕಾರ್ಯಕರ್ತೆ ಹುದ್ದೆ ಮೀಸಲಿಟ್ಟ ಕೇಂದ್ರಗಳಲ್ಲಿ ಆ ವರ್ಗಕ್ಕೆ ಸೇರಿದ ವಿಧವೆಯರು ಅರ್ಜಿ ಸಲ್ಲಿಸಿದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ತಿಳಿಸಿದಂತೆ ವಿಧವೆಯರನ್ನೇ ಆಯ್ಕೆ ಮಾಡಬೇಕು. ಬೇರೆ ವರ್ಗದ ವಿಧವೆಯರು ಅರ್ಜಿ ಸಲ್ಲಿಸಿದ ಪಕ್ಷದಲ್ಲಿ ಪರಿಗಣಿಸುವ ಅವಶ್ಯಕತೆಯಿರುವುದಿಲ್ಲ.

ಈ) ಅಂಗನವಾಡಿ ಕಾರ್ಯಕರ್ತೆ ಹುದ್ದೆಯಲ್ಲಿ ಶಾಲಾ ಪೂರ್ವ ಶಿಕ್ಷಣವನ್ನು 3-6 ವರ್ಷ ಮಕ್ಕಳಿಗೆ ನೀಡಬೇಕಾಗಿರುತ್ತದೆ, ಮನೆ ಭೇಟಿ ಹಾಗೂ ವಿವಿಧ ಮಾಹಿತಿಗಳನ್ನೊಳಗೊಂಡ ದಾಖಲೆಗಳನ್ನು ನಿರ್ವಹಿಸಬೇಕಾಗಿರುತ್ತದೆ. ಆದಕಾರಣ ಕಾರ್ಯಕರ್ತೆ ಹುದ್ದೆಗೆ ಕಿವುಡರು, ಮೂಕರು ಮತ್ತು ಕುರುಡು ಮತ್ತು ಮಾನಸಿಕ ಅಸ್ವಸ್ಥರಿಗೆ ಸದರಿ ಹುದ್ದೆಯನ್ನು ನಿರ್ವಹಿಸಲು ಅಶಕ್ತರಾದ ಕಾರಣ ಆ ವರ್ಗದ ಅಂಗವಿಕಲರಿಗೆ ಅವಕಾಶವಿಲ್ಲ. ಇವರನ್ನು ಹೊರತುಪಡಿಸಿ ಇತರೆ ದೈಹಿಕ ಅಂಗವೈಕಲ್ಯವುಳ್ಳವರು ಸದರಿ ಹುದ್ದೆ ನಿರ್ವಹಿಸಲು ಸಮರ್ಥರಿರುವವರು, ಶೇ 60 ಕ್ಕಿಂತ ಕಡಿಮೆ ಅಂಗವೈಕಲ್ಯತೆಯುಳ್ಳವರು ಅರ್ಜಿ ಸಲ್ಲಿಸಬಹುದಾಗಿದೆ. ಹಾಗೂ ಇವರಿಗೆ ಮೇಲಿನ ಇತರೆ ಅರ್ಹತೆಗಳಿರಬೇಕಾಗಿರುವುದು ಕಡ್ಡಾಯ ಹಾಗೂ ಸ್ಥಳೀಯರಾಗಿರಬೇಕು. ಅಂಗೀಕೃತ ಪ್ರಾಧಿಕಾರದಿಂದ ಸದರಿ ಹುದ್ದೆ ನಿರ್ವಹಿಸಲು ಸಮರ್ಥರಾಗಿದ್ದಾರೆಂಬುದರ ಬಗ್ಗೆ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು. ಅಂಗವಿಕಲ ಅಭ್ಯರ್ಥಿಗಳು ಅರ್ಹತೆಗನುಸಾರವಾಗಿ ಆಯ್ಕೆಯಾಗುವ ಸಂಭವವಿದ್ದಲ್ಲಿ ಆ ಸಂದರ್ಭದಲ್ಲಿ ಅಗತ್ಯವೆನಿಸಿದಲ್ಲಿ ಆ ಅಭ್ಯರ್ಥಿಯನ್ನು ಆಯ್ಕೆ ಸಮಿತಿಯ ಮುಂದೆ ಹಾಜರಾಗಲು ಸೂಚಿಸಿ ಸದರಿ ಹುದ್ದೆ ನಿರ್ವಹಿಸಲು ಸಮರ್ಥರೇ ಎಂಬ ಬಗ್ಗೆ ಸಮಿತಿಯು ಸಹ ನಿರ್ಧರಿಸಬಹುದಾಗಿದೆ.

5. ಅ) ಅಭ್ಯರ್ಥಿಗಳು ವಿದ್ಯಾರ್ಹತೆಯಲ್ಲಿ ಪಡೆದಿರುವ ಅಂಕಗಳು ಮತ್ತು ಬೋನಸ್ ಅಂಕಗಳನ್ನು ಕ್ರೋಢೀಕರಿಸಿ ಒಟ್ಟು ಅಂಕಗಳ ಆಧಾರದ ಮೇಲೆ ಪಟ್ಟಿಯನ್ನು ಸೂಚನಾ ಫಲಕದಲ್ಲಿ ಪ್ರಕಟಿಸತಕ್ಕದ್ದು. ಹೆಚ್ಚು ಅಂಕ ಪಡೆದ ಅಭ್ಯರ್ಥಿಯನ್ನು ಆಯ್ಕೆ ಮಾಡತಕ್ಕದ್ದು.

ಉದಾ : i) ಒಬ್ಬ ಅಭ್ಯರ್ಥಿಯು ಎಸ್.ಎಸ್.ಎಲ್.ಸಿಯಲ್ಲಿ ಪಡೆದ ಅಂಕಗಳು 350 ಇದ್ದು ಪ್ರತಿ ಶತ 56 ಆಗುತ್ತಿದ್ದು ಪಿಯುಸಿ ವಿದ್ಯಾರ್ಹತೆಯಿದ್ದಲ್ಲಿ 56+2 ಬೋನಸ್ ಅಂಕ ಸದರಿಯವರು ಗಳಿಸುವ ಒಟ್ಟು ಅಂಕಗಳು 58.

ii) ಒಬ್ಬ ಅಭ್ಯರ್ಥಿ ಪದವೀಧರರಾಗಿದ್ದು, ಎಸ್.ಎಸ್.ಎಲ್.ಸಿ ಯಲ್ಲಿ 350 ಅಂಕಪಡೆದಿದ್ದಲ್ಲಿ ಪ್ರತಿ ಶತ 56 ಆಗುತ್ತಿದ್ದು ಬೋನಸ್ 7ನ್ನು ಸೇರಿಸಿದಾಗ 56+7 ಅಂಕಗಳೂ ಒಟ್ಟು 63 ಅಂಕಗಳನ್ನು ಗಳಿಸುತ್ತಾರೆ. ಕಂಡಿಕೆ 4(ಅ) ಹಾಗೂ 5 ಉದಾಹರಣೆ ಪ್ರಕಾರ

iii) ಎಸ್.ಎಸ್.ಎಲ್.ಸಿ.ಯಲ್ಲಿ ಅನುತ್ತೀರ್ಣರಾದ ಅಭ್ಯರ್ಥಿಯನ್ನು ಪರಿಗಣಿಸ ಬೇಕಾದಲ್ಲಿ ಸದರಿ ಅಭ್ಯರ್ಥಿಯು 9ನೇ ತರಗತಿಯಲ್ಲಿ ಪಡೆದ ಅಂಕಗಳನ್ನು ಪರಿಗಣಿಸತಕ್ಕದ್ದು. ಆದರೆ ಸದರಿ ಅಭ್ಯರ್ಥಿಯು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಹಾಜರಾಗಿರುವುದು ಕಡ್ಡಾಯವಾಗಿರುತ್ತದೆ ಹಾಗೂ 9ನೇ ತರಗತಿಯಲ್ಲಿ ಪಡೆದ ಶೇಕಡಾವಾರು ಅಂಕಗಳಿಗೆ ಬೋನಸ್ ಅಂಕಗಳನ್ನು ಸೇರಿಸಬೇಕು.

iv) ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣ/ಅನುತ್ತೀರ್ಣ ಅಭ್ಯರ್ಥಿ ಲಭ್ಯವಿಲ್ಲದ್ದಾಗ 8ನೇ ತರಗತಿ ಪರಿಗಣಿಸಿದಾಗ 8ನೇ ತರಗತಿಯಲ್ಲಿ ಪಡೆದ ಶೇಕಡಾವಾರು ಅಂಕಗಳಿಗೆ ಬೋನಸ್ ಅಂಕಗಳನ್ನು ಕೂಡಿಸಬೇಕು.

v) ಒಬ್ಬ ಅಭ್ಯರ್ಥಿಯು ಅಂಗವಿಕಲರು, ಪರಿಶಿಷ್ಟಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ್ದು ನಿರಾಶ್ರಿತರಾಗಿದ್ದು ಪರಿತ್ಯಕ್ತೆಯಾಗಿದ್ದಲ್ಲಿ, ಪಿಯುಸಿ ವಿದ್ಯಾರ್ಹತೆಯಿದ್ದಲ್ಲಿ ಪ್ರತಿ ವಿನಾಯಿತಿಗೂ 5 ಬೋನಸ್ ಅಂಕಗಳನ್ನು ನೀಡುವುದು. ಅಂದರೆ ಸದರಿಯವರ ಎಸ್.ಎಸ್.ಎಲ್.ಸಿ ಶೇಕಡಾವಾರು ಅಂಕಗಳಿಗೆ ಅಂಗವಿಕಲರಿಗೆ 5+ ಪರಿಶಿಷ್ಟ ಜಾತಿ/ಪಂಗಡಕ್ಕೆ 5+ ನಿರಾಶ್ರಿತರಿಗೆ 5+ ಪರಿತ್ಯಕ್ತೆಗೆ 5+ ಪಿಯುಸಿಗೆ 2 = ಒಟ್ಟು 22 ಬೋನಸ್ ಅಂಕಗಳನ್ನು ನೀಡುವುದು.

vi) ಸಾಮಾನ್ಯ ವರ್ಗಕ್ಕೆ ಕಾರ್ಯಕರ್ತೆ ಹುದ್ದೆ ನಿಗದಿಪಡಿಸಿದ ಕೇಂದ್ರಗಳಿಗೆ ಪರಿಶಿಷ್ಟ ಜಾತಿಯ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದಾಗ ಅವರಿಗೆ 5 ಬೋನಸ್ ಅಂಕಗಳನ್ನು ನೀಡಬೇಕು. ಮೆರಿಟ್ ಮತ್ತು ಅರ್ಹತೆಗನುಸಾರವಾಗಿ ಅವರು ಆಯ್ಕೆಗೊಳ್ಳಬಹುದಾಗಿದೆ.

ಆ) ಅಂಗನವಾಡಿ ಕಾರ್ಯಕರ್ತೆಯರು ಶಾಲಾ ಪೂರ್ವ ಶಿಕ್ಷಣವನ್ನು ನಿರ್ವಹಿಸಬೇಕಾಗಿರುವುದರಿಂದ ಹಾಗೂ ದಾಖಲೆಗಳನ್ನು ಕನ್ನಡದಲ್ಲಿ ನಿರ್ವಹಿಸಬೇಕಾಗಿರುವುದರಿಂದ ಅಭ್ಯರ್ಥಿಗಳು ಯಾವುದೇ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದರೂ ಹಾಗೂ ಯಾವುದೇ ರಾಜ್ಯದಲ್ಲಿ ವ್ಯಾಸಂಗ ಮಾಡಿದ್ದರೂ ಸಹ ಅವರು ಕನ್ನಡ ಭಾಷೆಯನ್ನು ಓದುವ, ಬರೆಯುವ ಮತ್ತು ಮಾತನಾಡುವ ಜ್ಞಾನವಿರಬೇಕು, ಕನ್ನಡವನ್ನು ಒಂದು ಭಾಷೆಯಾಗಿ ಕಡ್ಡಾಯವಾಗಿ ವ್ಯಾಸಂಗ ಮಾಡಿರಬೇಕು. ಕನ್ನಡವನ್ನು ಮೂರನೇ ಭಾಷೆಯಾಗಿ ವ್ಯಾಸಂಗ ಮಾಡಿದ್ದು ಹಾಗೂ ಮಾತೃಭಾಷೆ ಕನ್ನಡವಲ್ಲದೇ ಇರುವ ಅಭ್ಯರ್ಥಿಗಳನ್ನು ಆಯ್ಕೆ ಸಮಿತಿಯು ಆಯ್ಕೆ ಸಮಯದಲ್ಲಿ ಅಂತಹ ಅಭ್ಯರ್ಥಿಗಳಿಗೆ ಸಂದರ್ಶನ ಏರ್ಪಡಿಸಿ ಹಾಗೂ ಅವಶ್ಯವಿದ್ದಲ್ಲಿ ಕನ್ನಡ ಕನಿಷ್ಠ ಜ್ಞಾನದ ಕುರಿತಂತೆ ಲಘು ಲಿಖಿತ ಪರೀಕ್ಷೆಯನ್ನು ನಡೆಸಿ ಅವರ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಿ ಅವರ ಆಯ್ಕೆಯನ್ನು ಮಾಡುವ ಬಗ್ಗೆ ಸಮಿತಿಯವರೇ ನಿರ್ಧರಿಸಬಹುದಾಗಿದೆ. ಅದೇ ರೀತಿ ಉರ್ದು ಭಾಷೆ ಅಲ್ಪಸಂಖ್ಯಾತರಿರುವ ಪ್ರದೇಶಗಳಲ್ಲಿ ಉರ್ದು ಭಾಷೆ ಹಾಗೂ ಕನ್ನಡ ಭಾಷೆ ಓದಲು ಬರೆಯಲು ಮಾತಮಾಡಲು ಬಲ್ಲ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕು.

ಇ) ಬೇರೆ ರಾಜ್ಯಗಳಲ್ಲಿ ವ್ಯಾಸಂಗ ಮಾಡಿದ್ದು, ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ನಿಗದಿಪಡಿಸಿದ ಗರಿಷ್ಠ ಅಂಕಗಳು ಹಾಗೂ ಕರ್ನಾಟಕ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಲ್ಲಿ ವ್ಯತ್ಯಾಸವಿದ್ದಲ್ಲಿ ಕರ್ನಾಟಕದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

ಮೇಲೆ ತಿಳಿಸಿದ ಪ್ರಕಾರ ಪ್ರಕಟಣೆಗನುಸಾರವಾಗಿ ಸ್ವೀಕೃತವಾದ ಅರ್ಜಿಗಳ ರಿಜಿಸ್ಟರ್ ನಿರ್ವಹಿಸಬೇಕು ಹಾಗೂ ಸ್ವೀಕೃತವಾದ ಅರ್ಜಿಗಳನ್ನು ವಿದ್ಯಾರ್ಹತೆಯಲ್ಲಿ ಪಡೆದ ಅಂಕ ಮತ್ತು ಬೋನಸ್ ಅಂಕಗಳನ್ನು ಒಳಗೊಂಡಂತೆ ಪಡೆದ ಒಟ್ಟು ಅಂಕಗಳಿಗನುಸಾರವಾಗಿ ಕ್ರೋಢೀಕೃತ ಪಟ್ಟಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸಿದ್ಧಪಡಿಸಬೇಕು ತಿರಸ್ಕೃತ ಅರ್ಜಿ ಪಟ್ಟಿಯನ್ನು ಸಕಾರಣದೊಂದಿಗೆ ಸಿದ್ಧಪಡಿಸಿ, ಆಯ್ಕೆ ಸಮಿತಿಯ ಮುಂದೆ ಮಂಡಿಸಬೇಕು. ಅಭ್ಯರ್ಥಿಗಳ ಪಟ್ಟಿಯನ್ನು ಅರ್ಹತೆ ಮತ್ತು ಮೆರಿಟ್‌ಗನುಸಾರವಾಗಿ ಪರಿಶೀಲಿಸಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಆಯ್ಕೆ ಮಾಡತಕ್ಕದ್ದು.

6. ಅ) ಆಯ್ಕೆ ಸಮಿತಿಯ ಎಲ್ಲಾ ಸದಸ್ಯರು ಹಾಜರಾಗಲು ಸಾಧ್ಯವಾಗದಂತಹ ಅನಿವಾರ್ಯ ಕಾರಣಗಳಿದ್ದಲ್ಲಿ ಕನಿಷ್ಠ 2/3 ರಷ್ಟು ಸದಸ್ಯರು ಕಡ್ಡಾಯವಾಗಿ ಹಾಜರಿರಬೇಕು.

ಆ) ಆಯ್ಕೆ ಸಮಿತಿಯ ನಡವಳಿಯನ್ನು ಸವಿವರವಾಗಿ Speaking order ನಮೂದಿಸಬೇಕು ಹಾಗೂ ಆಯ್ಕೆಯಾದ ಅಭ್ಯರ್ಥಿಗಳ ಹೆಸರುಗಳನ್ನು ನಡವಳಿಯಲ್ಲಿ ದಾಖಲಿಸಿ ಯಾವ ಮಾನದಂಡಗಳನ್ವಯ ಆಯ್ಕೆಮಾಡಲಾಗಿದೆ ಎಂಬ ಷರಾದೊಂದಿಗೆ ದಾಖಲಿಸಬೇಕು. ಹಾಜರಿರುವ ಆಯ್ಕೆ ಸಮಿತಿಯ ಎಲ್ಲಾ ಸದಸ್ಯರ ಸಹಿಯನ್ನು ಪಡೆಯಬೇಕು.

7. ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಿರುವ/ಹೊಸ ಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದಲ್ಲಿಯೇ ವಾಸಿಸುತ್ತಿರುವ ಸಹಾಯಕಿಯರಿದ್ದು ಅವರು ಎಸ್.ಎಸ್.ಎಲ್.ಸಿ ಉತ್ತೀರ್ಣರಾಗಿದ್ದು ಕನಿಷ್ಠ ಐದು ವರ್ಷ ಸೇವೆ ಸಲ್ಲಿಸಿದ್ದಲ್ಲಿ ಹಾಗೂ ಸದರಿಯವರು ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಲು ಇಚ್ಛಿಸಿ ಅರ್ಜಿ ಸಲ್ಲಿಸಿದ್ದಲ್ಲಿ ಸದರಿ ಅಂಗನವಾಡಿ ಕೇಂದ್ರಕ್ಕೆ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಪ್ರಮೇಯವಿರುವುದಿಲ್ಲ. ಸ್ವೀಕೃತವಾದ ಸಹಾಯಕಿಯ ಅರ್ಜಿ ನಿಯಮಾನುಸಾರ ಅರ್ಹವಾಗಿದ್ದಲ್ಲಿ ಸದರಿ ಸಹಾಯಕಿಯರನ್ನೇ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು. ಈ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಾದ ಉಪನಿರ್ದೇಶಕರಿಗೆ ಪ್ರಸ್ತಾವನೆಯನ್ನು ಸಲ್ಲಿಸಬೇಕು. ಉಪನಿರ್ದೇಶಕರು ಪ್ರಸ್ತಾವನೆ ಪರಿಶೀಲಿಸಿ ಆಯ್ಕೆ ಆದೇಶ ಹೊರಡಿಸತಕ್ಕದ್ದು. ಒಂದೇ ಗ್ರಾಮದಲ್ಲಿ ಇಬ್ಬರು ಎಸ್.ಎಸ್.ಎಲ್.ಸಿ. ಪಾಸಾದ ಸಹಾಯಕಿಯರಿದ್ದು ಅರ್ಜಿ ಸಲ್ಲಿಸಿದಲ್ಲಿ ಅವರ ಸೇವೆಯ ಹಿರಿತನವನ್ನು ಪರಿಗಣಿಸುವುದು.

8. ಅ) ಅರ್ಜಿಗಳ ಆಯ್ಕೆಯಲ್ಲಿ ಯಾವುದೇ ಲೋಪದೋಷಗಳು ಮತ್ತು ಅಕ್ರಮಗಳು ಕಂಡುಬಂದಲ್ಲಿ ಸಂಬಂಧ ಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಹಾಗೂ ಉಪನಿರ್ದೇಶಕರು ನೇರವಾಗಿ ಜವಾಬ್ದಾರರಾಗಿರುತ್ತಾರೆ.

ಆ) ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಆಯ್ಕೆ ಸಮಿತಿಯ ಸಭೆ ನಡೆದ ದಿನಾಂಕದಂದೆ ಸಿದ್ಧಪಡಿಸಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸೂಚನಾ ಫಲಕದಲ್ಲಿ ಪ್ರಕಟಿಸಿ ಆಕ್ಷೇಪಣೆಗಳನ್ನು ಆಹ್ವಾನಿಸಿ ಒಂದು ವಾರ ಕಾಲಾವಕಾಶ ನೀಡಬೇಕು. ಆಕ್ಷೇಪಣೆಗಳು ಸ್ವೀಕೃತವಾದಲ್ಲಿ ಅವುಗಳನ್ನು ಕ್ರೋಢೀಕರಿಸಿ ಪುನಃ ಆಯ್ಕೆ ಸಮಿತಿಯ ಸಭೆ ಕರೆದು ಚರ್ಚಿಸಿ ತದನಂತರ ಅಂತಿಮ ಪಟ್ಟಿಯನ್ನು ಸಿದ್ಧಗೊಳಿಸಬೇಕು. ಸೂಚನಾ ಫಲಕದಲ್ಲಿ ಪ್ರಕಟಿಸಬೇಕು ಹಾಗೂ ಆಯ್ಕೆ ಸಮಿತಿಯ ನಡವಳಿ ಆಧಾರದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೂರ್ಣ ವಿವರ ಮತ್ತು ದಾಖಲೆಗಳೊಂದಿಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪ್ರಸ್ತಾವನೆಯನ್ನು ಅನುಮೋದನೆಗಾಗಿ ಉಪನಿರ್ದೇಶಕರಿಗೆ ಸಲ್ಲಿಸುವುದು. ಉಪನಿರ್ದೇಶಕರು ಪ್ರಸ್ತಾವನೆಯನ್ನು ಪರಿಶೀಲಿಸಿ ಆದೇಶ ಹೊರಡಿಸುವುದು.

ಇ) ಸಂಬಂಧಪಟ್ಟ ಜಿಲ್ಲೆಯ ಉಪನಿರ್ದೇಶಕರು ಪ್ರಸ್ತಾವನೆಯನ್ನು ಪರಿಶೀಲಿಸಿ ನಿಯಮಾನುಸಾರ ಇರುವ ಬಗ್ಗೆ ದೃಢಪಡಿಸಿಕೊಂಡು ಆಯ್ಕೆ ಮಾಡಲಾದ ಅಭ್ಯರ್ಥಿಗಳನ್ನು ಅಂಗನವಾಡಿ ಕಾರ್ಯಕರ್ತೆಯಾಗಿ ಕಾರ್ಯನಿರ್ವಹಿಸಲು ನೇಮಕಾತಿ ಆದೇಶಗಳನ್ನು ಹೊರಡಿಸಬೇಕು ಹಾಗೂ ನೇಮಕಾತಿ ಆದೇಶದಲ್ಲಿ ಸದರಿ ಹುದ್ದೆಯು ಸಂಪೂರ್ಣವಾಗಿ ಗೌರವ ಸೇವೆಯಾಗಿದ್ದು, ಖಾಯಂ ಹುದ್ದೆಯಲ್ಲವೆಂಬ ಬಗ್ಗೆ ನೇಮಕಾತಿ ಆದೇಶದಲ್ಲಿ ತಿಳಿಸಬೇಕು.

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ನಡವಳಿ ಮತ್ತು ಆದೇಶದ ಪ್ರತಿಯನ್ನು ಸಲ್ಲಿಸತಕ್ಕದ್ದು.

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ. ಆರ್. 169

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಎಸ್‌ಜಿಎಸ್‌ವೈಗೆ ರಾಜ್ಯದ ಪಾಲಿನ 2010–11ನೇ ಸಾಲಿನ ಎರಡನೇ ಕಂತಿನ ಅನುದಾನವನ್ನು ಗದಗ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/1/2010/ಎಸ್‌ಜಿಎಸ್‌ವೈ–I(9) ದಿನಾಂಕ : 4–5–2010 ಮತ್ತು (38) ದಿನಾಂಕ : 18–6–2010.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 4–8–2010
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 56 ಬಿಆರ್‌ಎಸ್ 2010, ದಿನಾಂಕ : 29–9–2010.
4. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/2/2010, ಎಸ್‌ಜಿಎಸ್‌ವೈ– I (88), ದಿನಾಂಕ : 18–11–2010.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಯಡಿ 2010–11ನೇ ಸಾಲಿಗೆ ಓದಲಾಗಿದೆ (1) ರಲ್ಲಿ ಒಂದನೇ ಕಂತಿನ ಅನುದಾನ ರೂ. 47,41,09,000ಗಳನ್ನು ರಾಜ್ಯದ ಎಲ್ಲಾ 30 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಮೊದಲನೇ ಕಂತಿನ ಅನುದಾನ ರೂ. 15,80,36,000 ಬಿಡುಗಡೆ ಮಾಡಿದೆ.

ಓದಲಾಗಿದೆ (4) ರಲ್ಲಿ ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಗದಗ ಜಿಲ್ಲಾ ಪಂಚಾಯತಿಗೆ ರೂ. 1,34,68,000 ಗಳನ್ನು ಎರಡನೇ ಕಂತಿನ ಅನುದಾನವಾಗಿ ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯವು ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 44,89,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 04–01–2011.**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಗದಗ್ ಜಿಲ್ಲಾ ಪಂಚಾಯತಿಗೆ 2010–11ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನ ರೂ. 44,89,000 ಗಳನ್ನು ಅನುಬಂಧದಲ್ಲಿ ತೋರಿಸಿರುವ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು :**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ :2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ : 14–7–2005 ರನ್ವಯ ಖಜಾನೆಯಿಂದ ಪಡೆಯುವುದು.

ಗದಗ್ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜೆವೈ 2007 ದಿನಾಂಕ : 18–4–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

2010–11ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಗದಗ್ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 248 ಪಿಬಿಎಸ್ 2010, ದಿನಾಂಕ : 1–1–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 25 ಎಸ್‌ಜಿವೈ 2010, ಬೆಂಗಳೂರು, ದಿನಾಂಕ 4–1–2011**

(ರೂ.ಗಳಲ್ಲಿ)

| ಕ್ರ.ಸಂ. | ಜಿ.ಪಂ. ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2010–11ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ನಿಗದಿ ಪಡಿಸಿದ ಒಟ್ಟು ಅನುದಾನ (ಮೂಲ + ಹೆಚ್ಚುವರಿ) | ಈವರೆವಿಗೆ ಜಿಲ್ಲೆಗೆ ನೀಡಿರುವ ಅನುದಾನ (village haat ಸೇರಿ) | ಜಿಲ್ಲೆಗೆ ಲಭ್ಯವಿರುವ ಅನುದಾನ | 2010–11ನೇ ಸಾಲಿನಲ್ಲಿ ಕೇಂದ್ರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | 2010–11ನೇ ಸಾಲಿನಲ್ಲಿ ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|---|---|
| 1 | ಗದಗ್ | 462 | 2600ZZ0001 | 1,13,53,000 | 63,66,500 | 49,86,500 | 1,34,68,000 | 44,89,000 |

**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ. ಆರ್. 170

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2010–11ನೇ ಸಾಲಿನ ಶಾಸನಬದ್ಧ ಅನುದಾನ ಮೂರನೇ ತ್ರೈಮಾಸಿಕ ಕಂತನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 129 ಗ್ರಾಪಂಕಾ 2002 (3), ದಿನಾಂಕ : 2–12–2003.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 234 ಗ್ರಾಪಂಅ 2007, ದಿನಾಂಕ : 27–3–2008.
3. ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ ಆಇ 226 ವೆಚ್ಚ–6/2009, ದಿನಾಂಕ : 12–4–2010.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 142 ಗ್ರಾಪಂಅ 2010, ದಿನಾಂಕ : 22–4–2010.
5. ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ : ಆಇ 226 ವೆಚ್ಚ–6/2010, ದಿನಾಂಕ : 24–8–2010.
6. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 142 ಗ್ರಾಪಂಅ 2010, ದಿನಾಂಕ : 8–9–2010.
7. ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ : ಆಇ 226 ವೆಚ್ಚ–6/2009, ದಿನಾಂಕ : 7–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯಿಸಿ ರಸೀದಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಅಧೀನ ಕಾರ್ಯದರ್ಶಿ (ಜಿಪಂ) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ ರವರಿಗೆ ಸರ್ಕಾರವು ಆದೇಶಿಸಿದೆ.

2010–11ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಅಡಿ ಒಟ್ಟಾರೆ ರೂ. 33,774.00 ಲಕ್ಷಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯತಿಗೆ ವಾರ್ಷಿಕವಾಗಿ ತಲಾ ರೂ. 6.00 ಲಕ್ಷಗಳು ಲಭ್ಯವಾಗುತ್ತದೆ. ಈ ಸಾಲಿನ ಮೊದಲನೇ ಮತ್ತು ಎರಡನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕ ಶೀರ್ಷಿಕೆಯಿಂದ ಒಟ್ಟು ರೂ. 16882.50 ಲಕ್ಷಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (6) ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗಿದೆ. ಆರ್ಥಿಕ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (7) ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಗ್ರಾಮ ಪಂಚಾಯಿತಿಗಳಿಗೆ ಮೂರನೇ ತ್ರೈಮಾಸಿ ಅನುದಾನ ರೂ. 8442.00 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಮತಿ ನೀಡಿದೆ. ಪ್ರಸ್ತುತ ರಾಜ್ಯದಲ್ಲಿ 5627 ಗ್ರಾಮ ಪಂಚಾಯತಿಗಳಿರುವುದರಿಂದ, ಪ್ರತಿ ಗ್ರಾಮ ಪಂಚಾಯತಿಗೆ ಪ್ರತಿ ಕಂತಿಗೆ ರೂ. 1.50 ಲಕ್ಷಗಳಂತೆ ರೂ. 8440.50 ಲಕ್ಷಗಳನ್ನು ಬಿಡುಗಡೆಗೊಳಿಸಲು ಪರಿಶೀಲಿಸಲಾಗಿದ್ದು, ಸದರಿ ಅನುದಾನವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಂತೆ, ಗ್ರಾಮ ಪಂಚಾಯತಿಗಳ ಸಿಬ್ಬಂದಿ ವೇತನ ಮತ್ತು ಪ್ರಸ್ತುತ ಗ್ರಾಮ ಪಂಚಾಯತಿಗಳ ಅಕ್ಟೋಬರ್ 2010 ರಿಂದ ಡಿಸೆಂಬರ್ 2010 ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 142 ಗ್ರಾಪಂಅ 2010, ಬೆಂಗಳೂರು, ದಿನಾಂಕ : 20–12–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರತಿ ಗ್ರಾಮ ಪಂಚಾಯತಿಗೆ 2010–11 ನೇ ಸಾಲಿನ ಶಾಸನಬದ್ಧ ಅನುದಾನದ ಮೂರನೇ ತ್ರೈಮಾಸಿಕ ಕಂತಿನ ಮೊತ್ತ ರೂ. 8440.50 ಲಕ್ಷಗಳನ್ನು (ಎಂಟು ಸಾವಿರದ ನಾಲ್ಕು ನೂರ ನಲವತ್ತು ಲಕ್ಷದ ಐವತ್ತು ಸಾವಿರ ರೂಪಾಯಿಗಳು) 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ. ಈ ಅನುದಾನದ ಮೊತ್ತವನ್ನು ಪೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಉಳಿತಾಯ ಖಾತೆ ನಂಬರ್ 04462010088409 ರ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ತಲಾ ರೂ. 1.50 ಲಕ್ಷದಂತೆ ಮೂರನೇ ತ್ರೈಮಾಸಿಕ ಕಂತಿನ ಅನುದಾನವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರದ ಆದೇಶದಲ್ಲಿನ ಷರತ್ತುಗಳನ್ನು ಪಾಲಿಸುವ ನಿಬಂಧನೆಗಳಿಗೊಳಪಟ್ಟು, ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಪ್ರಸ್ತುತ ಗ್ರಾಮ ಪಂಚಾಯತಿಗಳ ಅಕ್ಟೋಬರ್ 2010 ರಿಂದ ಡಿಸೆಂಬರ್ 2010 ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಬ್ಯಾಂಕ್ ಖಾತೆಯ

ನಂಬರ್‌ಗಳಿಗೆ ಆನ್‌ಲೈನ್ ಮುಖಾಂತರ ವರ್ಗಾಯಿಸಲು ಆದೇಶಿಸಿದೆ. ಈ ಉದ್ದೇಶಗಳಲ್ಲದೇ ಈ ಅನುದಾನದಿಂದ ಯಾವುದೇ ಕಾಮಗಾರಿಗಳಿಗೆ ವಿನಿಯೋಗಿಸತಕ್ಕದ್ದಲ್ಲ, ಹಾಗೂ ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು ದಿನಾಂಕ : 31–1–2011 ರೊಳಗಾಗಿ ಸರ್ಕಾರಕ್ಕೆ ಕಳುಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 226 ವೆಚ್ಚ–6/2009, ದಿನಾಂಕ : 7–12–2010 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸ್ವರ್ಣಲತ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಅನುಬಂಧ

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 142 ಗ್ರಾಪಂಅ 2010, ದಿನಾಂಕ : 20–12–2010.**

| ಕ್ರಮ ಸಂಖ್ಯೆ | ಉಪ ಲೆಕ್ಕ ಶೀರ್ಷಿಕೆ | ಜಿಲ್ಲಾ ಪಂಚಾಯತಿ ಹೆಸರು | ಗ್ರಾಮ ಪಂಚಾಯಿತಿಗಳ ಸಂಖ್ಯೆ | 2010–11ನೇ ಸಾಲಿನ ಬಜೆಟ್ ( ರೂ ಲಕ್ಷಗಳಲ್ಲಿ) | 2010–11ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಿನ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|---|---|
| 1 | 401 | ಬೆಂಗಳೂರು (ನಗರ) | 86 | 516 | 129.00 |
| 2 | 402 | ಬೆಂಗಳೂರು (ಗ್ರಾ) | 98 | 588 | 147.00 |
| 3 | 403 | ಚಿತ್ರದುರ್ಗ | 185 | 1110 | 277.50 |
| 4 | 404 | ಕೋಲಾರ | 156 | 936 | 234.00 |
| 5 | 405 | ಶಿವಮೊಗ್ಗ | 260 | 1560 | 390.00 |
| 6 | 406 | ತುಮಕೂರು | 321 | 1926 | 481.50 |
| 7 | 407 | ಮೈಸೂರು | 235 | 1410 | 352.50 |
| 8 | 408 | ಚಿಕ್ಕಮಗಳೂರು | 226 | 1356 | 339.00 |
| 9 | 409 | ದಕ್ಷಿಣ ಕನ್ನಡ | 203 | 1218 | 304.50 |
| 10 | 410 | ಹಾಸನ | 258 | 1548 | 387.00 |
| 11 | 411 | ಕೊಡಗು | 98 | 588 | 147.00 |
| 12 | 412 | ಮಂಡ್ಯ | 232 | 1392 | 348.00 |
| 13 | 413 | ಬೆಳಗಾಂ | 485 | 2910 | 727.50 |
| 14 | 414 | ಬಿಜಾಪುರ | 199 | 1194 | 298.50 |
| 15 | 415 | ಧಾರವಾಡ | 127 | 762 | 190.50 |
| 16 | 416 | ಉತ್ತರ ಕನ್ನಡ | 207 | 1242 | 310.50 |
| 17 | 417 | ಗುಲ್ಬರ್ಗಾ | 220 | 1320 | 330.00 |
| 18 | 418 | ಬಳ್ಳಾರಿ | 189 | 1134 | 283.50 |
| 19 | 419 | ಬೀದರ್ | 175 | 1050 | 262.50 |
| 20 | 420 | ರಾಯಚೂರು | 164 | 984 | 246.00 |
| 21 | 421 | ಯಾದಗಿರಿ | 117 | 702 | 175.50 |
| 22 | 451 | ದಾವಣಗೆರೆ | 230 | 1380 | 345.00 |
| 23 | 452 | ರಾಮನಗರ | 130 | 780 | 195.00 |
| 24 | 453 | ಚಿಕ್ಕಬಳ್ಳಾಪುರ | 151 | 906 | 226.50 |
| 25 | 456 | ಚಾಮರಾಜನಗರ | 120 | 720 | 180.00 |
| 26 | 457 | ಉಡುಪಿ | 146 | 876 | 219.00 |
| 27 | 461 | ಬಾಗಲಕೋಟೆ | 161 | 966 | 241.50 |
| 28 | 462 | ಗದಗ | 106 | 636 | 159.00 |
| 29 | 463 | ಹಾವೇರಿ | 208 | 1248 | 312.00 |
| 30 | 466 | ಕೊಪ್ಪಳ | 134 | 804 | 201.00 |
| | | ಒಟ್ಟು | 5627 | 33762 | 8440.50 |

**ಸ್ವರ್ಣಲತ ಎಂ. ಭಂಡಾರೆ**
ಪಿ. ಆರ್. 171
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಎಸ್.ನಿರಂಜನ್, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು, ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ರಾಯಚೂರು ಇವರ ಆದೇಶ ಸಂಖ್ಯೆ : ಜಿಪರಾ/ಸಿಸಿಎ/5/2002–03, ದಿನಾಂಕ : 21–08–2010.

**2.** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ರಾಯಚೂರು ಇವರ ಪತ್ರ ಸಂಖ್ಯೆ : ಜಿಪರಾ/ಸಿಸಿಎ/5/2002–03/2010–11, ದಿನಾಂಕ : 12–10–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ಶ್ರೀ ಎಸ್.ನಿರಂಜನ್, ಕಿರಿಯ ಇಂಜಿನಿಯರ್, (ವಿಶೇಷ ದರ್ಜೆ) ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ರವರು ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು, ಸ್ಟೇಷನ್ ರಸ್ತೆ, ರಾಯಚೂರು ಇಲ್ಲಿ ಹೆಚ್.ಕೆ.ಡಿ.ಬಿ. ಅನುದಾನದಲ್ಲಿ ಕೈಗೊಂಡಿರುವ ಮೊದಲನೇ ಮಹಡಿ, ಕಟ್ಟಡ ಕಾಮಗಾರಿ ಪೂರ್ಣಗೊಳಿಸದೇ ಕಾಮಗಾರಿ ಪೂರ್ಣಗೊಂಡಿರುವುದಾಗಿ ದಾಖಲೆಗಳಲ್ಲಿ ನಮೂದಿಸಿ ತತ್ಸಂಬಂಧಿಸಿದ ಅನುದಾನವನ್ನು ಸದರಿಯವರು ಪಾವತಿ ಪಡೆದಿರುವುದು ದೃಢಪಡುತ್ತದೆ ಎಂದು ಸ್ಥಳ ಪರಿಶೀಲನೆ ಆಧಾರದ ಮೇಲೆ ಮತ್ತು ದಾಖಲಾತಿಗಳನ್ನಾಧರಿಸಿ ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ಸಲ್ಲಿಸಿರುವ ವರದಿಯ ಮೇಲೆ ಶ್ರೀಯುತರು ಸರ್ಕಾರದ ಹಣ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವ ಹಿನ್ನೆಲೆಯಲ್ಲಿ ಅವರ ಮೇಲೆ ಮಾಡಿರುವ ಇತರೇ ಆರೋಪಗಳ ಬಗ್ಗೆ ಸಹ ಕೂಲಂಕಷವಾದ ತನಿಖೆಯನ್ನು ನಡೆಸಬೇಕಾಗಿರುತ್ತದೆ ಎಂದು ತಿಳಿಸುತ್ತಾ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ಶ್ರೀ ಎಸ್.ನಿರಂಜನ್, ಕಿರಿಯ ಇಂಜಿನಿಯರ್, (ವಿಶೇಷ ದರ್ಜೆ) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಇವರ ವಿರುದ್ಧ ಮಾಡಿರುವ ಆಪಾದನೆಗಳು ಬಹಳ ಸೂಕ್ಷ್ಮವಾಗಿದ್ದು, ಹಲವಾರು ಕಾನೂನಿನ ಸಮಸ್ಯೆಗಳನ್ನು ಕೂಲಂಕಷವಾಗಿ ಪರಿಶೀಲಿಸುವ ಅಗತ್ಯತೆ ಇರುವುದರಿಂದ ಸದರಿ ಪ್ರಕರಣದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಿಂದ ವಿಚಾರಣೆಯನ್ನು ನಡೆಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಪ್ರಕರಣದಲ್ಲಿ ವಿವರವಾದ ತನಿಖೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಕಲಂ–7 (2ಎ) ರನ್ವಯ ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತರಿಗೆ ವಹಿಸಲು ನಿರ್ಣಯಿಸಲಾಗಿದೆ.

ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 265 ಜಿಪಅ 2010, ಬೆಂಗಳೂರು, ದಿನಾಂಕ : 04ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ನಿರಂಜನ್, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ), ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ವಿವರವಾದ ತನಿಖೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಕಲಂ–7 (2ಎ) ರನ್ವಯ ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತರಿಗೆ ವಹಿಸಲಾಗಿದೆ.

ಈ ಪ್ರಕರಣದಲ್ಲಿ ತನಿಖೆ ಪೂರ್ಣಗೊಂಡ ನಂತರ ಸ್ಪಷ್ಟ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ವರದಿಯನ್ನು ನೀಡಬೇಕೆಂದು ಈ ಮೂಲಕ ತಿಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ವೈ.ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು–ಎ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 172

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರದ ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ರಾಮನಗರ ಜಿಲ್ಲೆಯ ಆರು ಜನ ಜೀತವಿಮುಕ್ತರಿಗೆ 2010–11ನೇ ಸಾಲಿನಲ್ಲಿ ಪೂರ್ಣ ಸಹಾಯಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್.2004 ದಿನಾಂಕ : 21–01–2006.

**2.** ಇಂಟರ್ ನ್ಯಾಷನಲ್ ಜಸ್ಟೀಸ್ ಮಿಷನ್ (ಐ.ಜೆ.ಎಂ) ಕಲ್ಯಾಣ ನಗರ, ಬೆಂಗಳೂರು ಇವರು ಸಹಾಯಕ ಆಯುಕ್ತರು, ಮಂಗಳೂರು ಉಪವಿಭಾಗ ಇವರಿಗೆ ದಿನಾಂಕ : 19–11–2010 ರಂದು ವರದಿ ಮಾಡಿರುವ ಅನುಸಾರ.

**3.** ಸಹಾಯಕ ಆಯುಕ್ತರು, ಮಂಗಳೂರು ಉಪವಿಭಾಗ ದಕ್ಷಿಣ ಕನ್ನಡ ಜಿಲ್ಲೆ ಇವರು ದಿನಾಂಕ : 01–12–2010 ರಂದು ಆರು ಜನರಿಗೆ ವಿತರಿಸಿರುವ ಜೀತ ವಿಮುಕ್ತ ಬಿಡುಗಡೆ ಪ್ರಮಾಣ ಪತ್ರ.

**4.** ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಇವರ ಪತ್ರ ಸಂಖ್ಯೆ : ಎಲ್.ಎಸ್.ಜೆ./ಸಿ.ಆರ್.88/2010–11 ದಿನಾಂಕ : 04–12–2010ರಲ್ಲಿ ಸರ್ಕಾರಕ್ಕೆ ವರದಿ ಮಾಡಿರುವಂತೆ.

**ಪ್ರಸ್ತಾವನೆ:**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ : 21–01–2006ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ : 21–01–2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನವನ್ನು **ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.**

ಮೇಲೆ ಓದಲಾದ ಕ್ರ.ಸಂ. (3)ರಂತೆ ಸಹಾಯಕ ಆಯುಕ್ತರು, ಮಂಗಳೂರು ಉಪವಿಭಾಗ ದಕ್ಷಿಣ ಕನ್ನಡ ಜಿಲ್ಲೆ ಇವರು ದಿನಾಂಕ : 01–12–2010ರಂದು ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ, ಹುಣಸೇಮಾರನಹಳ್ಳಿ ಗ್ರಾಮದ ನಿವಾಸಿಗಳಾದ ಆರು ಜನ ಜೀತದಾಳುಗಳಾದ **1. ನವೀನ್ S/o ಕುಮಾರ್, 2. ಮಹಾದೇವಿ D/o ಲೇಟ್ ಮರ್ಮಾಸ್ವಾಮಿ, 3. ಕುಮಾರಿ ಲಾವಣ್ಯ(8 ವರ್ಷ) D/o ಮಾಧವಿ, 4. ಸೀನ S/o ಕುಮಾರ್, 5. ಮಹಾದೇವ S/o ರಾಮಸ್ವಾಮಿ ಹಾಗೂ 6. ಯಶೋಧ W/o ಮಹಾದೇವ** ಇವರುಗಳು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ವಿಟ್ಲ ಕಸಬ ಗ್ರಾಮದ ಉಕ್ಕುಡ ಎಂಬಲ್ಲಿ ಕಲ್ಲು ಗಣಿಗಾರಿಕೆಯ ಮಾಲೀಕರಾದ ಶ್ರೀ ಅಬ್ದುಲ್ ಅಜೀಜ್ ಬಿನ್ ಅಬ್ಬಾಸ್ ಹಾಜಿ ಎಂಬುವರ ಬಳಿ ಜೀತದಾಳುಗಳಾಗಿ ದುಡಿಯುತ್ತಿದ್ದುದ್ದನ್ನು ಗುರುತಿಸಿ, ಜೀತದಾಳು ವಿಮೋಚನಾ ಕಾಯಿದೆ 1976ರಡಿ ತಪ್ಪಿತಸ್ಥರ ವಿರುದ್ಧ ಪ್ರಕರಣ ದಾಖಲಿಸಿಕೊಂಡು, ದಿನಾಂಕ : 01–12–2010 ರಂದು ಜೀತಪದ್ಧತಿಯಿಂದ ವಿಮುಕ್ತಿಗೊಳಿಸಿ, ಜೀತವಿಮುಕ್ತ ಪ್ರಮಾಣಪತ್ರವನ್ನು ಹೊರಡಿಸಿದ್ದು, ಈ ಕುರಿತು ದಕ್ಷಿಣಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (4)ರನ್ವಯ ಸರ್ಕಾರಕ್ಕೆ ವರದಿ ಮಾಡಿರುವ ಹಿನ್ನೆಲೆಯಲ್ಲಿ ಹಾಗೂ ತಮ್ಮಿಂದ ಸೂಕ್ತ ವರದಿಯು ಸಕಾಲದಲ್ಲಿ ಸ್ವೀಕೃತವಾಗದೆ ಇರುವುದರಿಂದ ಸದರಿ ಜೀತ ವಿಮುಕ್ತರಿಗೆ ರಾಜ್ಯ ಸರ್ಕಾರದ ಜೀತವಿಮುಕ್ತರ ಪುರ್ನವಸತಿ ಸಹಾಯಧನವನ್ನು ತಕ್ಷಣದಿಂದಲೇ ಕಲ್ಪಿಸಿಕೊಡಲು ಮನಗಂಡು, ಉಲ್ಲೇಖ(3)ರನ್ವಯ ವಿತರಿಸಿರುವ ಜೀತ ವಿಮುಕ್ತ ಬಿಡುಗಡೆ ಪ್ರಮಾಣ ಪತ್ರಗಳನ್ನು ಆಧರಿಸಿ ಸದರಿ ಆರು ಜನ ಜೀತವಿಮುಕ್ತರಿಗೆ ಜನವರಿ 2011 ರಿಂದ ಅನ್ವಯವಾಗುವಂತೆ ಡಿಸೆಂಬರ್ 2012ರ ವರೆಗೆ 24 ತಿಂಗಳುಗಳ ಅವಧಿಯವರೆಗೆ, ರೂ. 300/– ಮಾಶಾಸನ ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಸದರಿ ಅವಧಿಯ ಒಟ್ಟು 24 ತಿಂಗಳಿಗೆ ಪ್ರತಿಯೊಬ್ಬರಿಗೆ ರೂ. 7,200/–ರಂತೆ ಒಟ್ಟು ರೂ. 43,200/–ಗಳನ್ನು ಆರು ಜನ ಜೀತ ವಿಮುಕ್ತರಿಗೆ ಬಿಡುಗಡೆ ಮಾಡಲು ಈ ಯೋಜನೆಯಡಿ ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ 2230–01–198–6–01–300 ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಂ.ಗ್ರಾಅಪ.1.ಆರ್‌ಬಿಎಲ್ 2010 (ರಾ) ಬೆಂಗಳೂರು, ದಿನಾಂಕ : 04ನೇ ಜನವರಿ 2011**

1. ಜೀತವಿಮುಕ್ತರ ಪುರ್ನವಸತಿ ಸಹಾಯಧನ ಯೋಜನೆ ಅಡಿ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ಆರು ಜನ ಜೀತವಿಮುಕ್ತರಿಗೆ 2010–11ನೇ ಸಾಲಿನಲ್ಲಿ ಒಟ್ಟು 24 ತಿಂಗಳ ಅವಧಿಗೆ (ಜನವರಿ 2011 ರಿಂದ ಡಿಸೆಂಬರ್ 2012 ವರೆಗೆ) ತಗಲುವ ಮಾಹೆಯಾನ ರೂ. 300.00ರಂತೆ ಸಹಾಯಧನ ಪಾವತಿಸಲು ಒಟ್ಟು ರೂ. 43,200/– (ನಲವತ್ತಮೂರು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ)ಗಳನ್ನು ಈ ಸಾಲಿನಲ್ಲಿಯೇ ರಾಮನಗರ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.
2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯತಿಗಳಿಗೆ ಸಹಾಯ–6–ಗ್ರಾಮ ಪಂಚಾಯತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.
3. **ಈ ಆದೇಶದಲ್ಲಿ ನಮೂದಿಸಿರುವ ಜೀತ ವಿಮುಕ್ತರ ವಿವರಗಳನ್ನು ಜಿಲ್ಲಾಧಿಕಾರಿಗಳು ದಕ್ಷಿಣಕನ್ನಡ ಇವರ ಉಲ್ಲೇಖ(4)ರ ಪತ್ರದಲ್ಲಿ ವರದಿಯನ್ನಾಧರಿಸಿ ಪರಿಗಣಿಸಿದೆ. ಹಾಗೂ ಸದರಿ ಆರು ಜನ ಜೀತ ವಿಮುಕ್ತರಿಗೆ ತಕ್ಷಣದಿಂದಲೇ ಪರಿಹಾರ ನೀಡುವ ಅಗತ್ಯತೆ ಹಿನೆಲೆಯಲ್ಲಿ ಮಾಶಾಸನ ಮೊತ್ತವನ್ನು ಮಂಜೂರು ಮಾಡಲಾಗಿದ್ದು, ಸದರಿ ಜೀತ ವಿಮುಕ್ತರ ಇರುವಿಕೆಯ ಬಗ್ಗೆ ಜಿಲ್ಲೆಯ ಜಿಲ್ಲಾಧಿಕಾರಿ/ಉಪ ವಿಭಾಗಾಧಿಕಾರಿಗಳಿಂದ ಖಾತರಿ ಮಾಡಿಕೊಳ್ಳುವ ಮೂಲಕ ಮೊತ್ತವನ್ನು ಪಾವತಿಸಲು ಕ್ರಮ ಕೈಗೊಳ್ಳುವುದು. ಖಾತರಿಯಾಗದಿದ್ದಲ್ಲಿ, ಸದರಿ ಮೊತ್ತವನ್ನು ಒಂದು ತಿಂಗಳೊಳಗಾಗಿ ತಪ್ಪದೆ ಸರ್ಕಾರಕ್ಕೆ ಹಿಂದಿರುಗಿಸಲು ಕ್ರಮ ತೆಗೆದುಕೊಳ್ಳುವುದು.**
4. ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್ 2004 ದಿನಾಂಕ : 21–01–2006 ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.
5. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ **01 ಪಿಬಿಎಸ್ 2010 ದಿನಾಂಕ : 03–01–2011** ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಎಸ್. ಪ್ರಸನ್ನಕುಮಾರ್**

ನಿರ್ದೇಶಕರು

ಪಿ.ಆರ್. 173

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಬಕವಿ–ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ನಅಇ 81 ಬೆಮಪ್ರಾ 2008, ದಿನಾಂಕ : 27–05–2008.
2. ರಬಕವಿ–ಬನಹಟ್ಟಿ ನಗರ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ ನಯೋಪ್ರಾರಬ : ಬಮಾಪ್ಲಾ (ಪರಿಷ್ಕೃತ–1) 09–10/26, ದಿನಾಂಕ : 19–02–2010.
3. ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ : ನಗ್ರಾಯೋ (6) : ಉನಿ 1 : ರಬಯೋಪ್ರಾರ/43/12/2009, ದಿನಾಂಕ : 12–03–2010ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ, ರಬಕವಿ–ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1)ಗೆ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ರಬಕವಿ–ಬನಹಟ್ಟಿ ನಗರ ಯೋಜನಾ ಪ್ರಾಧಿಕಾರವು ರಬಕವಿ–ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಯ (ಪರಿಷ್ಕೃತ–1) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ, ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತದಲ್ಲಿ ರಬಕವಿ–ಬನಹಟ್ಟಿ ಪಟ್ಟಣದ ಜನಸಂಖ್ಯೆಯು 2021 ರಲ್ಲಿ 1,25,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ರಬಕವಿ–ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 8499 ಹೆಕ್ಟೇರ್ ಪ್ರದೇಶದಲ್ಲಿ 1700 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 1700 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 853.40 ಹೆಕ್ಟೇರ್ (ಶೇ. 50.20), ವಾಣಿಜ್ಯಕ್ಕಾಗಿ 78.20 ಹೆಕ್ಟೇರ್ (ಶೇ. 04.60), ಕೈಗಾರಿಕೆಗಾಗಿ 140.25 ಹೆಕ್ಟೇರ್ (ಶೇ. 8.25), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕಾಗಿ 147.50 ಹೆಕ್ಟೇರ್ (ಶೇ.8.68), ನಾಗರೀಕ ಸೌಲಭ್ಯಕ್ಕಾಗಿ 2.00 ಹೆಕ್ಟೇರ್ (ಶೇ.0.12), ಉದ್ಯಾನವನ/ಬಯಲು ಜಾಗಗಳಿಗೆ 181.15 ಹೆಕ್ಟೇರ್ (ಶೇ. 10.65), ಸಾರಿಗೆ/ಸಂಪರ್ಕ ವಲಯಕ್ಕೆ 297.50 ಹೆಕ್ಟೇರ್ (ಶೇ. 17.50), ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆ (ಪರಿಷ್ಕೃತ–1)ನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 92 ಬೆಮಪ್ರಾ 2010, ಬೆಂಗಳೂರು, ದಿನಾಂಕ: 28–12–2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಬಕವಿ–ಬನಹಟ್ಟಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಕಲಂ 13(3)ರನ್ವಯ ಸರ್ಕಾರವು ಅಂತಿಮ ಅನುಮೋದನೆಯನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ನೀಡಲಾಗಿದೆ.

**"ಈ ಆದೇಶದ ದಿನಾಂಕದಿಂದ 2 (ಎರಡು) ವರ್ಷಗಳವರೆಗೆ ಯೋಜನಾ ಪ್ರಾಧಿಕಾರವು ಯಾವುದೇ ತರಹದ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸಕೂಡದು"**

ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 174

## ಯುವಜನ ಸೇವಾ ಸಚಿವಾಲಯ

**ವಿಷಯ :** ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ ಅವರಿಗೆ 27–12–2010 ರಿಂದ 01–01–2011 ರವರೆಗೆ ತಮಿಳುನಾಡು ಪ್ರವಾಸ ಕೈಗೊಳ್ಳಲು ಅನುಮತಿ ನೀಡುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 170 ಸಮನ 2010, ಬೆಂಗಳೂರು ದಿನಾಂಕ : 31–12–2010.**

ತಮಿಳುನಾಡಿನ ಕೊಯಮತ್ತೂರು ಸಮೀಪದ ಅಲಿಯಾರ್‌ನಲ್ಲಿ ವರ್ಲ್ಡ್ ಕಮ್ಯುನಿಟಿ ಸರ್ವೀಸ್ ಸೆಂಟರ್ ವತಿಯಿಂದ ಜರುಗುವ ಘಟಕೋತ್ಸವದಲ್ಲಿ ಪಾಲ್ಗೊಂಡು ವಿದ್ಯಾರ್ಥಿಗಳಿಗೆ ಪದವಿ ಪ್ರಧಾನ ಮಾಡುವ ಸಲುವಾಗಿ ಹಾಗೂ ತಮಿಳುನಾಡಿನ ವಿವಿಧ ರಾಷ್ಟ್ರೀಯ ಯೋಜನಾ ಕೇಂದ್ರಗಳಿಗೆ ಭೇಟಿ ನೀಡುವ ಸಲುವಾಗಿ ದಿನಾಂಕ : 27–12–2010 ರಿಂದ 01–01–2011ರವರೆಗೆ ತಮಿಳುನಾಡು ಪ್ರವಾಸ ಕೈಗೊಳ್ಳಲು ಪ್ರಧಾನ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಯುವಜನ ಸೇವಾ ಇಲಾಖೆ

ಪಿ.ಆರ್. 175

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಜಯಶ್ರೀ ಆರ್.ಟಿ. ವೈದ್ಯರು ದರ್ಜೆ–2(ಅ) ಇವರನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಆಯುಷ್ ಇವರ ಪತ್ರ ಸಂಖ್ಯೆ : ಆಯುಷ್ : 130 : ಸಿಬ್ಬಂದಿ(4) 2010–11 ದಿನಾಂಕ : 15–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಡಾ: ಜಯಶ್ರೀ ಆರ್.ಟಿ.ವೈದ್ಯರು ದರ್ಜೆ–2(ಅ), ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಅಂತಾಪುರ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರು ಆಯುರ್ವೇದ ಸ್ನಾತಕೋತ್ತರ ಪದವಿ ಕೋರ್ಸಿಗೆ ಆಯ್ಕೆಗೊಂಡು ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಸೇವಾನಿರತ ವೈದ್ಯರ ಕೋಟಾದಡಿಯಲ್ಲಿ 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಶಲ್ಯತಂತ್ರ ವಿಷಯದಲ್ಲಿ ವ್ಯಾಸಂಗ ಮಾಡಲು ಆಯ್ಕೆ ಮಾಡಲಾಗಿದೆ ಎಂದು ತಿಳಿಸುತ್ತಾ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ

ನಿಯಮ 61ರ ಅಪೆಂಡಿಕ್ಸ್ 2(ಎ)(1)ರನ್ವಯ ನಿಗದಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿರುವ ಹಿನ್ನೆಲೆಯಲ್ಲಿ ಮೂರು ವರ್ಷಗಳ ಅವಧಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 461 ಪಿಐಎಂ 2010, ಬೆಂಗಳೂರು, ದಿನಾಂಕ: 29–12–2010.**

ಡಾ: ಜಯಶ್ರೀ ಆರ್.ಟಿ.ವೈದ್ಯರು ದರ್ಜೆ–2(ಅ), ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಅಂತಾಪುರ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು 2010–11ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ಶಲ್ಯತಂತ್ರ ವಿಷಯದ ತಜ್ಞತೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ 2(ಎ)(1)ರ ಉಪ ನಿಯಮದನ್ವಯ ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಡಿಸಿ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಹಾಗೂ ಸದರಿ ಮಹಾವಿದ್ಯಾಲಯದಲ್ಲಿ ವೇತನವನ್ನು ಪಡೆಯುವುದರೊಂದಿಗೆ ಮೂರು ವರ್ಷಗಳ ಅವಧಿಯ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1. ಅವರ ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2. ಅವರ ವಿದ್ಯಾಭ್ಯಾಸದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 8(15)(ಸಿ) ಪ್ರಕಾರ ಕೆಲಸದ ಮೇಲಿದ್ದ ಅವಧಿಯೆಂದು ಪರಿಗಣಿಸುವುದು.
3. ನಿಯೋಜನೆಯ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಭತ್ಯೆಗಳನ್ನು ಹಾಗೂ ಕಾಲಕಾಲಕ್ಕೆ ಲಭ್ಯವಾಗುವ ವೇತನ ಬಡ್ತಿಗಳು ಸೇರಿದಂತೆ ಯಥಾವತ್ತಾಗಿ (ಲಭ್ಯವಾಗುವಂತೆ) ಮುಂದುವರೆಸುವುದು.
4. ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಮೂನೆ–19 ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪತ್ರವನ್ನು ಪಡೆಯುವುದು ಹಾಗೂ ಸ್ನಾತಕೋತ್ತರ ವ್ಯಾಸಂಗ ಮುಗಿದ ನಂತರ ಇಲಾಖೆಯಲ್ಲಿ 10 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
5. ವ್ಯಾಸಂಗಕ್ಕೆ ಸೇರಲು ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
6. ಉನ್ನತ ಶಿಕ್ಷಣಕ್ಕೆ ಪ್ರತಿನಿಯೋಜಿಸಲ್ಪಡುವ ವೈದ್ಯರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಡಿಯಲ್ಲಿ ಸವಲತ್ತುಗಳನ್ನು ಮಾತ್ರವೇ ಪಡೆಯುವುದು.
7. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳಲ್ಲಿ ನಿಯೋಜನೆಗೆ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಪ್ರತಿಯೋಜನೆಯಿಂದ ವ್ಯಾಸಂಗ ಪೂರೈಸಿದ ತರುವಾಯ ಪೂರೈಸುವುದು.
8. ವ್ಯಾಸಂಗದ ಸ್ಥಳದಲ್ಲಿ ದಿನಭತ್ಯೆ ಒಂದರ ಅರ್ಧದಷ್ಟು ಶಿಷ್ಯವೇತನ ನೀಡುವುದು.
9. ಕರ್ನಾಟಕ ನಾಗರೀಕ ಸೇವಾ ನಿಯಮಗಳ ಅಪೆಂಡಿಕ್ಸ್–1 'ಎ' ನ ನಿಯಮ 1ರ ಉಪ ನಿಯಮ 8(ಡಿ) ರನ್ವಯ ವ್ಯಾಸಂಗ ಶುಲ್ಕವನ್ನು ಪಡೆಯಲು ಅರ್ಹರಿರುತ್ತಾರೆ.
10. ವ್ಯಾಸಂಗವನ್ನು ಪೂರ್ಣಗೊಳಿಸದೇ ಇದ್ದಲ್ಲಿ, ತಗುಲಿರುವ ವೆಚ್ಚವನ್ನು ಸರ್ಕಾರಕ್ಕೆ ಹಿಂದಿರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್.ಇಟಗಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 176

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ.ಚಾಂದ್ ಸಾಹೇಬ್, ಉಪತಹಶೀಲ್ದಾರ್, ದೊಡ್ಡಮಳೂರು ನಾಡಕಛೇರಿ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧದ ಇಲಾಖಾ ವಿಚಾರಣೆ.

**ಓದಲಾಗಿದೆ :**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಾಂಪ್ಟ್/ಉಪಲೋಕ್/ಬಿಪಿ/79/99–2000/ಡಿಆರ್/ಇ2, ದಿನಾಂಕ 17–09–2002.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 376 ಬಿಎಂಎಂ 2002, ದಿನಾಂಕ 09–10–2002.
3. ಮಾನ್ಯ ಲೋಕಾಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ : ಎಲ್‌ಓಕೆ/ಎಆರ್‌ಇ–3/ಇಎನ್‌ಕ್ಯೂ–11/2008–09, ದಿ : 08–09–09.
4. ದಿನಾಂಕ : 06–11–2009ರ ಎರಡನೇ ಕಾರಣ ಕೇಳುವ ನೋಟೀಸು.
5. ಶ್ರೀ ಸಿ.ಚಾಂದ್ ಸಾಹೇಬ್, ಉಪತಹಶೀಲ್ದಾರ್, ಇವರು ದಿನಾಂಕ 04–05–2010 ರಂದು ನೀಡಿದ ಲಿಖಿತ ಹೇಳಿಕೆ.
6. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ರವರ ಪತ್ರ ಸಂಖ್ಯೆ : ಪಿಎಸ್‌ಸಿ/96/ಸಿಎನ್‌ಎಸ್/10, ದಿ : 23–10–10.

**ಪ್ರಸ್ತಾವನೆ:**

ಶ್ರೀ ಸಿ.ಚಾಂದ್ ಸಾಹೇಬ್, ಉಪತಹಶೀಲ್ದಾರ್, ದೊಡ್ಡಮಳೂರು ನಾಡಕಛೇರಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇವರು ಮಂಕುಂದ ಗ್ರಾಮದ ಸ.ನಂ. 12/2 ಮತ್ತು 16/3 ರ ಖಾತೆ ಬದಲಾವಣೆ ಮಾಡುವ ಸಂಬಂಧ ಶ್ರೀ ರಾಮಯ್ಯ ರವರಿಂದ ದಿನಾಂಕ 18–11–1998 ರಂದು ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಲೋಕಾಯುಕ್ತ ಪೋಲೀಸರಿಗೆ ಸಿಕ್ಕಿಬಿದ್ದ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2)ರನ್ವಯ ತನಿಖೆ ಜರುಗಿಸಿ ತನಿಖೆಯಿಂದ ಆರೋಪಿತರ ವಿರುದ್ಧ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುತ್ತದೆಂದು ಅಭಿಪ್ರಾಯಪಟ್ಟು ಆರೋಪಿತರ ವಿರುದ್ಧ ಶಿಸ್ತು ಕ್ರಮ

ಜರುಗಿಸಲು ಸಿಸಿಎ ನಿಯಮಾವಳಿ ನಿಯಮ 14–ಎ ರಡಿಯಲ್ಲಿ ಇಲಾಖಾ ವಿಚಾರಣೆಗೆ ಒಳಪಡಿಸಲು ಮಾನ್ಯ ಲೋಕಾಯುಕ್ತರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ಮೇಲೆ ಓದಲಾದ (2)ರ ದಿನಾಂಕ 09–10–2002 ರ ಆದೇಶದಲ್ಲಿ ಆಪಾದಿತ ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮ 11 ಮತ್ತು 11–ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಪ್ರಕರಣವನ್ನು ಮಾನ್ಯ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಲಾಗಿತ್ತು.

ಮಾನ್ಯ ಲೋಕಾಯುಕ್ತರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಆರೋಪಿತ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿ ಮತ್ತು ಶಿಫಾರಸ್ಸಿನನ್ವಯ ಈ ಕೆಳಗಿನಂತೆ ದಂಡನೆ ವಿಧಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ನೌಕರರ ಹೆಸರು | ದಂಡನೆ ಸ್ವರೂಪ |
|---|---|---|
| 1 | ಶ್ರೀ ಸಿ.ಚಾಂದ್ ಸಾಹೇಬ್, ಉಪತಹಶೀಲ್ದಾರ್, ದೊಡ್ಡಮಳೂರು, ನಾಡಕಛೇರಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ. | ಸದರಿ ನೌಕರರು ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ಸದರಿಯವರ ನಿವೃತ್ತಿ ವೇತನದಲ್ಲಿ ಶೇಕಡಾ 25 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವುದು. |

ಆಪಾದಿತ ನೌಕರರಿಗೆ ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನ ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಜಾರಿ ಮಾಡಿ ಹೇಳಿಕೆ ಸಮಜಾಯಿಷಿ ನೀಡುವಂತೆ ತಿಳಿಸಲಾಗಿತ್ತು. ಸದರಿ ಆಪಾದಿತ ನೌಕರರು ಲಿಖಿತ ಉತ್ತರ ನೀಡಿ ಮಾನವೀಯ ದೃಷ್ಟಿಯಿಂದ ನಿವೃತ್ತಿ ವೇತನದಲ್ಲಿ ಶೇಕಡ 25 ರಷ್ಟು ಕಟಾವು ಮಾಡುವುದನ್ನು ಕೈಬಿಡುವಂತೆ ಕ್ರಮ ಸಂಖ್ಯೆ (5)ರಲ್ಲಿ ಕೋರಿದ್ದಾರೆ.

ಈ ಪ್ರಕರಣದಲ್ಲಿ ಸದರಿ ನೌಕರರು ಈಗಾಗಲೇ ನಿವೃತ್ತಿ ಹೊಂದಿರುವುದರಿಂದ ಇವರ ನಿವೃತ್ತಿ ವೇತನದಲ್ಲಿ ಶೇಕಡ 25 ರಷ್ಟನ್ನು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಶಾಶ್ವತವಾಗಿ ಕಡತಗೊಳಿಸುವ ದಂಡನೆ ವಿಧಿಸುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿ ಆಯೋಗವು ದಿನಾಂಕ 23–10–2010 ರಲ್ಲಿ ಸದರಿ ನಿವೃತ್ತ ನೌಕರರ ನಿವೃತ್ತಿ ವೇತನದಿಂದ ಶೇಕಡ 25 ರಷ್ಟನ್ನು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಶಾಶ್ವತವಾಗಿ ಕಡತಗೊಳಿಸುವ ದಂಡನೆಗೆ ಸಹಮತಿ ನೀಡಿರುತ್ತದೆ.

ಈ ಮೇಲೆ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸನ್ನು ಹಾಗೂ ಲೋಕಸೇವಾ ಆಯೋಗದ ಸಹಮತಿಯನ್ನು ಸರ್ಕಾರವು ಒಪ್ಪಿ ಆಪಾದಿತ ನೌಕರರಿಗೆ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ/376/ಬಿಎಂಎಂ/2002, ಬೆಂಗಳೂರು, ದಿನಾಂಕ: 21–12–2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆಪಾದಿತ ನೌಕರನ ಮೇಲಿನ ಭ್ರಷ್ಟಾಚಾರದ ಆಪಾದನೆಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಸರ್ಕಾರವು ಒಪ್ಪಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಸಿಸಿಎ) ನಿಯಮಾವಳಿಗಳು 11–ಎ ರನ್ವಯ ಹಾಗೂ ಕೆ.ಸಿ.ಎಸ್.ಆರ್. ನಿಯಮ 214(1)(ಎ) ರಂತೆ ಶ್ರೀ ಸಿ.ಚಾಂದ್ ಸಾಹೇಬ್, ಉಪತಹಶೀಲ್ದಾರ್, ದೊಡ್ಡಮಳೂರು ನಾಡಕಛೇರಿ, ಇವರಿಗೆ ನಿವೃತ್ತಿ ವೇತನದಲ್ಲಿ ಶೇಕಡಾ 25 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ.(ಸೇವೆಗಳು ಎ)

ಪಿ.ಆರ್. 177

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ.ವಿ.ಹಿರೇಮಠ, ತಹಶೀಲ್ದಾರ್, ಕುಂದಗೋಳ ಪ್ರಸ್ತುತ ನಿವೃತ್ತ ಹಾಗೂ ಶ್ರೀ ವಿ.ಎಸ್., ಕಟಗಿ, ದ್ವಿ.ದ.ಸ. ಇವರುಗಳ ವಿರುದ್ಧದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಕುರಿತು–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಡೈರೆಕ್ಟರ್ ಜನರಲ್, ತನಿಖಾ ದಳ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : lok/inv(g)/L-22/Cr.12/96 Dhr. ದಿನಾಂಕ : 11–4–1996.
2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 35 ಎಡಿಇ 1996 ದಿನಾಂಕ 24–05–1996.
3. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 35 ಎಡಿಇ 1996 ದಿನಾಂಕ 10–12–1996.
4. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 35 ಎಡಿಇ 1996 ದಿನಾಂಕ 17–04–1997.
5. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 74 ಎಟಿಎಸ್ 1997 ದಿನಾಂಕ 01–05–1997.
6. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಎಲ್–22/ಸಿಆರ್/12/1996/ಡಿಹೆಚ್‌ಆರ್ ದಿನಾಂಕ : 05–05–2010.
7. ಧಾರವಾಡ ಅಪರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಸಿಬ್ಬಂದಿ/1/ವಹಿ/39/1996–97 ದಿನಾಂಕ : 25–09–2010.

**ಪ್ರಸ್ತಾವನೆ:**

ಶ್ರೀ ಎಂ.ವಿ.ಹಿರೇಮಠ, ತಹಶೀಲ್ದಾರ್, ಕುಂದಗೋಳ (ಪ್ರಸ್ತುತ ನಿವೃತ್ತ) ಹಾಗೂ ಶ್ರೀ ವಿ.ಎಸ್., ಕಟಗಿ, ದ್ವಿತೀಯ ದರ್ಜೆ ಸಹಾಯಕರು ಇವರುಗಳು ತಮ್ಮ ಅಧಿಕಾರ ಕೃಪೆ ತೋರಲು ಫಿರ್ಯಾದುದಾರರಾದ ಶ್ರೀ ಲಿಂಗನಗೌಡ ಎಂಬುವವರಿಂದ ರೂ. 1000/–ಗಳ ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿದ್ದು, ಈ ಸಂಬಂಧ ಇಬ್ಬರು ಆಪಾದಿತರ ವಿರುದ್ಧ ಭ್ರಷ್ಟಾಚಾರ ನಿರೋಧ ಕಾಯ್ದೆಯಡಿಯಲ್ಲಿ

ಕ್ರಿಮಿನಲ್ ಮೊಕದ್ದಮೆ ಹೂಡಿರುವುದಾಗಿ ಡೈರೆಕ್ಟರ್ ಜನರಲ್, ತನಿಖಾ ದಳ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ದಿನಾಂಕ : 11–4–1996 ರ ಪತ್ರದಲ್ಲಿ ವರದಿ ಮಾಡಿರುವ ಮೇರೆಗೆ, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 10(1)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಸರ್ಕಾರದ ದಿನಾಂಕ : 24–5–1996 ರ ಆದೇಶದಲ್ಲಿ, ಶ್ರೀ ಎಂ.ವಿ.ಹಿರೇಮಠ, ತಹಶೀಲ್ದಾರ್, ಕುಂದಗೋಳ (ಪ್ರಸ್ತುತ ನಿವೃತ್ತ) ಮತ್ತು ಶ್ರೀ ವಿ.ಎಸ್. ಕಟಗಿ, ದ್ವಿತೀಯ ದರ್ಜೆ ಸಹಾಯಕರು ಇವರುಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಕಾಯ್ದಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಎಂ.ವಿ.ಹಿರೇಮಠ್ ಇವರು ದಿನಾಂಕ : 30–07–1996 ರಂದು ಸಲ್ಲಿಸಿರುವ ಮನವಿಯಲ್ಲಿ ತಮ್ಮನ್ನು ಅಮಾನತ್ತಿನಿಂದ ಬಿಡುಗಡೆ ಮಾಡುವಂತೆ ಕೋರಿದ್ದ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ : (3)ರ ದಿನಾಂಕ : 10–12–1996ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ವಿ.ಹಿರೇಮಠ್, ತಹಶೀಲ್ದಾರ್, ಕುಂದಗೋಳ ಪ್ರಸ್ತುತ ನಿವೃತ್ತ ಇವರ ವಿರುದ್ಧ ಇಲಾಖಾ : ಕ್ರಿಮಿನಲ್ ವಿಚಾರಣೆಯನ್ನು ಕಾಯ್ದಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆ ಮಾಡಿ, ಸದರಿಯವರ ನೇಮಕಾತಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು ಎಂದು ಆದೇಶಿಸಲಾಗಿರುತ್ತದೆ. ಮತ್ತು ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 35 ಎಡಿಇ 1996 ದಿನಾಂಕ : 12–2–1997 ರಲ್ಲಿ ಶ್ರೀ ವಿ.ಎಸ್.ಕಟಗಿ, ದ್ವಿ.ದ.ಸ., ಕುಂದಗೋಳ ಇವರ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತಿನಿಂದ ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಡೈರೆಕ್ಟರ್ ಜನರಲ್, ತನಿಖಾ ದಳ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ದಿನಾಂಕ : 18–12–1996ರ ಪತ್ರದಲ್ಲಿ ಕೋರಿರುವಂತೆ, 1988 ರ ಭ್ರಷ್ಟಾಚಾರ ನಿರೋಧ ಕಾಯ್ದೆ ಪ್ರಕರಣ 19ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎಂ.ವಿ.ಹಿರೇಮಠ್, ತಹಶೀಲ್ದಾರ್, ಕುಂದಗೋಳ ಮತ್ತು ಶ್ರೀ ವಿ.ಎಸ್.ಕಟಗಿ, ದ್ವಿತೀಯ ದರ್ಜೆ ಸಹಾಯಕರು ಇವರುಗಳ ವಿರುದ್ಧ 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ ಪ್ರಕರಣ 7 ಮತ್ತು 13(1)(ಡಿ)ರ ಜೊತೆಯಲ್ಲಿ ಓದಲಾದ ಪ್ರಕರಣ 13(2)ರ ಪ್ರಕಾರ ಶಿಕ್ಷಾರ್ಹವಾಗಿರುವ ಅಪರಾಧಗಳ ವಿಷಯದಲ್ಲಿ ಸಕ್ಷಮ ಅಧಿಕಾರ ವ್ಯಾಪ್ತಿಯುಳ್ಳ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಮೇಲೆ ಓದಲಾದ ಕ್ರಮ ಸಂಖ್ಯೆ : (4)ರ ದಿನಾಂಕ : 17–4–1997ರ ಆದೇಶದಲ್ಲಿ ಮಂಜೂರಾತಿ ನೀಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (5)ರ ದಿನಾಂಕ : 1–5–1997ರ ಅಧಿಸೂಚನೆಯಲ್ಲಿ, ಶ್ರೀ ಎಂ.ವಿ. ಹಿರೇಮಠ್, ತಹಶೀಲ್ದಾರ್ ಗ್ರೇಡ್–1 (ನೇಮಕಾತಿ ನಿರೀಕ್ಷಣೆ) ಇವರನ್ನು ತಹಶೀಲ್ದಾರ್, ಬ್ಯಾಡಗಿ, ಧಾರವಾಡ ಜಿಲ್ಲೆ ಎಂದು ಶ್ರೀ ಎಸ್.ವಿ. ಗಣಚಾರಿ ಯವರ ನಿವೃತ್ತಿಯಿಂದ ತೆರವಾದ ಜಾಗದಲ್ಲಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (6)ರ ದಿನಾಂಕ : 5–5–2010ರ ಪತ್ರದಲ್ಲಿ, ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ : 12/1996 ರ (ಸ್ಪೆಷಲ್ ಕೇಸ್ ನಂ. 11/1998) ಆಪಾದಿತರುಗಳಾದ ಶ್ರೀ ಎಂ.ವಿ.ಹಿರೇಮಠ, ತಹಶೀಲ್ದಾರ್ ಮತ್ತು ಶ್ರೀ ವಿ.ಎಸ್.ಕಟಗಿ, ದ್ವಿ.ದ.ಸ. ತಹಶೀಲ್ದಾರ್ ಕಛೇರಿ, ಕುಂದಗೋಳ, ಧಾರವಾಡ ಜಿಲ್ಲೆ, ಇವರುಗಳನ್ನು ಧಾರವಾಡ ಘನ ಜಿಲ್ಲಾ ಸತ್ರ ನ್ಯಾಯಾಲಯವು ದಿನಾಂಕ : 23–9–2009 ರಂದು ದೋಷಮುಕ್ತಗೊಳಿಸಿ ನೀಡಿರುವ ತೀರ್ಪಿನ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸದಿರಲು ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/702/ಹೆಚ್‌ಸಿಪಿ–1/2010 ದಿನಾಂಕ : 22–4–2010ರಲ್ಲಿ ತೀರ್ಮಾನಿಸಿರುತ್ತದೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (7)ರ ಧಾರವಾಡ ಅಪರ ಜಿಲ್ಲಾಧಿಕಾರಿಗಳ ದಿನಾಂಕ : 25–9–2010ರ ಪತ್ರದಲ್ಲಿ, ಶ್ರೀ ಎಂ.ವಿ.ಹಿರೇಮಠ, ನಿವೃತ್ತ ತಹಶೀಲ್ದಾರ್ ಇವರ ಮೇಲಿನ ಲೋಕಾಯುಕ್ತ ಪ್ರಕರಣಕ್ಕೆ ಸಂಬಂಧಿಸಿದಂತೆ, ಜಿಲ್ಲಾ ಸತ್ರ ಹಾಗೂ ವಿಶೇಷ ನ್ಯಾಯಾಲಯ, ಧಾರವಾಡ ಇವರ ದಿನಾಂಕ : 23–9–2009ರ ಪತ್ರದಲ್ಲಿ, ನ್ಯಾಯಾಲಯದ ಆದೇಶದನ್ವಯ ದೋಷಮುಕ್ತರಾದ ಕಾರಣ ಮತ್ತು ಈಗಾಗಲೇ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸದರಿ ನ್ಯಾಯಾಲಯದ ಆದೇಶದ ತೀರ್ಪಿನ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸದಿರಲು ತೀರ್ಮಾನಿಸಿದ್ದರಿಂದ ತಮಗೆ ಬರಬೇಕಾದ ಡಿ.ಸಿ.ಆರ್.ಜಿ., ಕಮ್ಯುಟೇಷನ್ ವ್ಯಾಲ್ಯೂ ಪೆನ್‌ಶೆನ್ ಮತ್ತು ಅಮಾನತ್ತು ಅವಧಿಯನ್ನು ಕರ್ತವ್ಯದ ಅವಧಿ ಎಂದು ಘೋಷಿಸುವ ಕುರಿತು ಆದೇಶ ಹೊರಡಿಸಲು ವಿನಂತಿಸಿ ಸಲ್ಲಿಸಿರುವ ದಿನಾಂಕ : 6–9–2010ರ ಅರ್ಜಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಸೂಕ್ತ ಆದೇಶ ಹೊರಡಿಸುವಂತೆ ವಿನಂತಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 35 ಎಡಿಇ 1996, ಬೆಂಗಳೂರು, ದಿನಾಂಕ: 24–12–2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎಂ.ವಿ. ಹಿರೇಮಠ, (ಹಿಂದಿನ ತಹಶೀಲ್ದಾರ್, ಕುಂದಗೋಳ) ನಿವೃತ್ತ ತಹಶೀಲ್ದಾರ್ ಮತ್ತು ಶ್ರೀ ವಿ.ಎಸ್.ಕಟಗಿ, ದ್ವಿ.ದ.ಸ. ಇವರುಗಳ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣವನ್ನು ಮುಕ್ತಾಯಗೊಳಿಸಿ, ಅಮಾನತ್ತು ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ, ಆದೇಶಿಸಿದೆ. ಹಾಗೂ ಇವರಿಗೆ ನಿಯಮಾನುಸಾರ ಲಭ್ಯವಾಗುವ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಲು ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್.ಬಿ.ಸಸಾಲಟ್ಟಿ

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ.(ಸೇವೆಗಳು–3)

ಪಿ.ಆರ್. 178

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : 2010-11ನೇ ಸಾಲಿನಲ್ಲಿ ಆಹಾರ ಪಾರ್ಕ್ ಯೋಜನೆ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಸಿಐ 352 ಎಸ್‌ಪಿಐ 2008(ಭಾ), ದಿನಾಂಕ: 26.05.2010.

2. ಸರ್ಕಾರಿ ಆದೇಶ ಸಂಖ್ಯೆ: ಸಿಐ 352 ಎಸ್‌ಪಿಐ 2008(ಭಾ), ದಿನಾಂಕ: 25.11.2010.

3. ಆಯುಕ್ತರ ಪತ್ರ ಸಂಖ್ಯೆ: ಎಂಎಸ್‌ಎಂಇ/ಎಸ್I/ಆಹಾರ ಪಾರ್ಕ್/12/2010-11, ದಿನಾಂಕ: 06.12.2010.

**ಪ್ರಸ್ತಾವನೆ:**

2010-11 ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "4851-00-800-5-00-132 ಆಹಾರ ಪಾರ್ಕ್" ಅಡಿಯಲ್ಲಿ ಆಹಾರ ಪಾರ್ಕ್ ಅಭಿವೃದ್ಧಿಗೋಸ್ಕರ `. 1000-00 ಲಕ್ಷಗಳನ್ನು ಒದಗಿಸಲಾಗಿರುತ್ತದೆ. ಮೊದಲಕಂತಾಗಿ `. 250.00 ಲಕ್ಷಗಳನ್ನು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ ವಿಶೇಷ ಘಟಕ ಯೋಜನೆ, ಹಾಗೂ ಗಿರಿಜನ ಉಪಯೋಜನೆ ಅಡಿಯಲ್ಲಿನ ಮೊತ್ತ ಒಟ್ಟು `.1.62.+0.65 ಲಕ್ಷ= `.227.00ಲಕ್ಷಗಳನ್ನು ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರಕ್ಕೆ ಆಧ್ಯರ್ಪಿಸಿಕೊಳ್ಳಲಾಗಿದೆ. ಮೇಲ್ಕಂಡಂತೆ ಉಳಿದ ಅನುದಾನದಲ್ಲಿ `.300.00 ಲಕ್ಷಗಳನ್ನು ಬಿಡುಗಡೆ ಮಾಡಲು ಅಪರ ನಿರ್ದೇಶಕರು (ಎಂ.ಎಸ್.ಎಂ.ಇ) ರವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 352 ಎಸ್‌ಪಿಐ 2008(P) ಬೆಂಗಳೂರು ದಿನಾಂಕ: 04.01.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2010-2011ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "4851-00-800-5-00-132 (ಯೋಜನೆ) ಆಹಾರ ಪಾರ್ಕ್" ರಡಿಯಲ್ಲಿ `.200.00 ಲಕ್ಷಗಳನ್ನು (`.ಎರಡು ನೂರು ಲಕ್ಷಗಳು ಮಾತ್ರ) 2ನೇ ಕಂತಾಗಿ ಬಾಗಲಕೋಟೆ, ಜೇವರ್ಗಿ ಮತ್ತು ಶಿವಮೊಗ್ಗ ಆಹಾರ ಪಾರ್ಕ್‌ಗಳ ಅಭಿವೃದ್ಧಿಗಾಗಿ ಈ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

ಸದರಿ ಮೊತ್ತವನ್ನು ವಿಶೇಷಾಧಿಕಾರಿಗಳು, ಆಹಾರ ಕರ್ನಾಟಕ ನಿಯಮಿತ, ಖನಿಜ ಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು ರವರು ಸ್ವೀಕೃತಿ ರಸೀದಿಯನ್ನು ಸಲ್ಲಿಸಿ, ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2106 ವೆಚ್ಚ-1/2010, ದಿನಾಂಕ: 31.12.2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ವಿ. ಶ್ರೀನಿವಾಸ ದೀಕ್ಷಿತ್**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್ 179

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2010-11ನೇ ಸಾಲಿಗೆ ನಿಗಧಿ ಪಡಿಸಿರುವ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 137 ಕೆಎಂಯು 2010, ದಿನಾಂಕ 05.08.2010

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ: ಎಸಿಟಿ: 1:18:2010-11 ದಿನಾಂಕ:12.11.2010.

**ಪ್ರಸ್ತಾವನೆ:**

2010-11ನೇ ಸಾಲಿಗೆ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ನಿಗದಿ ಪಡಿಸಲಾದ ಅನುದಾನ ರೂ. 25.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ. 12.50 ಲಕ್ಷಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಮೇಲೆ(1) ರಲ್ಲಿ ಓದಲಾದ ದಿನಾಂಕ 05.08.2010ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ. ನಿಗದಿ ಪಡಿಸಲಾದ ಅನುದಾನ ರೂ.25.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ಬಿಡುಗಡೆಗೊಳಿಸಿರುವ ರೂ. 12.50 ಲಕ್ಷಗಳಿಗೆ ಈಗಾಗಲೇ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಲಾಗಿದ್ದು, 2ನೇ ಕಂತಿನ ಅನುದಾನ ರೂ.12.50 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205-00-103-0-18(ಯೋಜನೆ) 101 ಸಹಾಯಾನುದಾನದಡಿಯಲ್ಲಿ ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ 12.11.2010ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕೆಎಂಯು 2010 ಬೆಂಗಳೂರು ದಿನಾಂಕ: 03.01.2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010-11 ನೇ ಸಾಲಿಗೆ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ನಿಗದಿ ಪಡಿಸಲಾದ ಅನುದಾನ ರೂ.25.00 ಲಕ್ಷಗಳಲ್ಲಿ ಎರಡನೇ ಕಂತಾಗಿ ರೂ. 12.50 ಲಕ್ಷ (ರೂ. ಹನ್ನೆರಡು ಲಕ್ಷ ಐವತ್ತು ಸಾವಿರಗಳು ಮಾತ್ರ)ಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–18(ಯೋಜನೆ) 101 ಸಹಾಯಾನುದಾನ ಅಡಿಯಲ್ಲಿ ಭರಿಸತಕ್ಕದ್ದು ಹಾಗೂ ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ:28.12.2010ರ ಟಿಪ್ಪಣಿ ಸಂಖ್ಯೆ ಶಿಇ 2203 ಐಎಫ್ (ಬಿ&ಎ) 2010ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್ 180

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಮೆ: ಚೆಟ್ಟಿನಾಡು ಸಿಮೆಂಟ್ ಕಾರ್ಪೊರೇಷನ್ ಲಿಮಿಟೆಡ್ ರವರು ರಸ್ತೆ ನಿರ್ಮಾಣ ಮಾಡಲು ಜಮೀನು ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಸಿಐ 117 ಎಸ್‌ಪಿಐ 2008, ದಿನಾಂಕ: 11.06.2010.
2. ಮೆ: ಚೆಟ್ಟಿನಾಡು ಸಿಮೆಂಟ್ ಕಾರ್ಪೊರೇಷನ್ ಲಿ ರವರ ಪತ್ರ ಸಂಖ್ಯೆ: SEC/KALLUR/2010:8747, ದಿನಾಂಕ: 21.10.2010

**ಪ್ರಸ್ತಾವನೆ:**

ಮೆ: ಚೆಟ್ಟಿನಾಡು ಸಿಮೆಂಟ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ ಮೇಲೆ(1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2.5 MTPA Cement Plant and 30 MW Capative Power generation ನ್ನು ` 660.00 ಕೋಟಿಗಳ ವೆಚ್ಚದಲ್ಲಿ ಕಲ್ಲೂರು ಗ್ರಾಮ, ಚಿಂಚೋಳ್ಳಿ ತಾ: ಗುಲ್ಬರ್ಗಾ ಜಿಲ್ಲೆ ಇಲ್ಲಿ ಸ್ಥಾಪಿಸಲು ಅನುಮೋದನೆಯನ್ನು ನೀಡಲಾಗಿದೆ. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ, ಘಟಕದವರು ಪ್ಲಾಂಟ್ ಮತ್ತು ಕಾಲೋನಿಗಳ ಲೇಔಟ್‌ಗಳ ಯೋಜನೆಯನ್ನು ತಯಾರಿಸುವ ಹಂತದಲ್ಲಿ ಹತ್ತಿರದ ಸರ್ಕಾರಿ ರಸ್ತೆಗೆ ಅಪ್ರೋಚ್ ರಸ್ತೆ ನಿರ್ಮಿಸಲು ಭಕ್ತಂಪಲ್ಲಿ ಗ್ರಾಮ ಹಾಗೂ ಗಂಗನಪಲ್ಲಿ ಗ್ರಾಮಗಳ ಸಣ್ಣ ಪ್ರಮಾಣದ ಜಮೀನಿನಲ್ಲಿ ಬರುವುದಿಲ್ಲವೆಂದು ಕಂಡು ಬರುತ್ತಿದ್ದು, ಭಕ್ತಂಪಲ್ಲಿ ಗ್ರಾಮದ ಸರ್ವೆ ನಂ:56 ದಲ್ಲಿ 3.35 ಎಕರೆ ಹಾಗೂ ಗಂಗನಪಲ್ಲಿ ಗ್ರಾಮದ ಸರ್ವೆ ನಂ:35ರಲ್ಲಿ 4.15 ಎಕರೆ ಜಮೀನನ್ನು ಖರೀದಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 117 ಎಸ್‌ಪಿಐ 2008 ಬೆಂಗಳೂರು ದಿನಾಂಕ: 06–01–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಮೆ: ಚೆಟ್ಟಿನಾಡು ಸಿಮೆಂಟ್ ಕಾರ್ಪೊರೇಷನ್ ಲಿಮಿಟೆಡ್ ಅವರ ಪ್ಲಾಂಟ್‌ನಿಂದ ಸರ್ಕಾರಿ ರಸ್ತೆಗೆ ಅಪ್ರೋಚ್ ರಸ್ತೆ ನಿರ್ಮಾಣ ಮಾಡುವ ಸಲುವಾಗಿ ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕಿನ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿ ಜಮೀನು ಖರೀದಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1. ಭಕ್ತಂಪಲ್ಲಿ ಗ್ರಾಮದ ಸರ್ವೆ ನಂ: 56 ರಲ್ಲಿ 3.35 ಎಕರೆ.
2. ಗಂಗನಪಲ್ಲಿ ಗ್ರಾಮದ ಸರ್ವೆ ನಂ; 35 ರಲ್ಲಿ 4.15 ಎಕರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ವಿ. ಶ್ರೀನಿವಾಸ ದೀಕ್ಷಿತ್**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್ 182

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ** : ಕರ್ನಾಟಕ ಅಗತ್ಯ ವಸ್ತುಗಳು (ಸಾವಿಪ) ನಿಯಂತ್ರಣಾ ಆದೇಶ 1992 ಹಾಗೂ ಅಗತ್ಯ ವಸ್ತುಗಳ ಕಾಯ್ದೆ 1955 ರಡಿ ವ್ಯವಹರಿಸಲಾಗುತ್ತಿರುವ ಪ್ರಕರಣಗಳ ವಿಚಾರಣೆ ನಡೆಸಲು ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ: ಅನಾಸ 252 ಇಭತ 2009, ದಿನಾಂಕ: 25–10–2010.
2. ಮಾನ್ಯ ಇಂಧನ ಹಾಗೂ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸಚಿವರ ಟಿಪ್ಪಣಿ.

**ಪ್ರಸ್ತಾವನೆ:**

ಕರ್ನಾಟಕ ಅಗತ್ಯ ವಸ್ತುಗಳು (ಸಾವಿಪ) ನಿಯಂತ್ರಣಾ ಆದೇಶ 1992ರ ಕ್ಲಾಸ್ 20ರಡಿ ನ್ಯಾಯಬೆಲೆ ಅಂಗಡಿಗಳ ಅಮಾನತ್ತು ಅಥವಾ ರದ್ಧತಿ ಬಗ್ಗೆ ಹಾಗೂ ಅಗತ್ಯ ವಸ್ತುಗಳ ಕಾಯ್ದೆ 1955ರ ಸೆಕ್ಷನ್ 6(2) ರಡಿಯಲ್ಲಿ ಸರ್ಕಾರದ ಮುಂದೆ ಸಲ್ಲಿಸಲಾದ ಮೇಲ್ಮನವಿ ಮತ್ತು ಪುನರ್ ಪರಿಶೀಲನಾ ಅರ್ಜಿಗಳ ವಿಚಾರಣೆಯನ್ನು ನಡೆಸಲು ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸಚಿವರು ಪ್ರಾಧಿಕಾರವಾಗಿರುತ್ತಾರೆಂದು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಆದೇಶಿಸಲಾಗಿತ್ತು.

ಇನ್ನು ಮುಂದೆ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರು ಸದರಿ ಪ್ರಕರಣಗಳ ವಿಚಾರಣೆಯನ್ನು ನಡೆಸಲು ಅಧಿಕಾರವನ್ನು ಪ್ರತ್ಯಾಯೋಜಿಸಲು ಮೇಲೆ (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅನಸಾ 252 ಇಭತ 2009, ಬೆಂಗಳೂರು, ದಿನಾಂಕ:10–1–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಅಗತ್ಯ ವಸ್ತುಗಳು (ಸಾವಿಪ) ನಿಯಂತ್ರಣಾ ಆದೇಶ 1992ರ ಕ್ಲಾಸ್ 20ರಡಿ ನ್ಯಾಯಬೆಲೆ ಅಂಗಡಿಗಳ ಅಮಾನತ್ತು ಅಥವಾ ರದ್ಧತಿ ಬಗ್ಗೆ ಹಾಗೂ ಅಗತ್ಯ ವಸ್ತುಗಳ ಕಾಯ್ದೆ 1955ರ ಸೆಕ್ಷನ್6(2)ರಡಿಯಲ್ಲಿ ಸರ್ಕಾರದ ಮುಂದೆ ಸಲ್ಲಿಸಲಾದ ಮೇಲ್ಮನವಿ ಮತ್ತು ಪುನರ್ ಪರಿಶೀಲನಾ ಅರ್ಜಿಗಳ ವಿಚಾರಣೆಯನ್ನು ನಡೆಸಲು ಇನ್ನು ಮುಂದೆ ಸರ್ಕಾರದ ಕಾರ್ಯದರ್ಶಿಗಳು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರಿಗೆ ಮುಂದಿನ ಆದೇಶದವರೆಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್ 183

## ಕಂದಾಯ ಸಚಿವಾಲಯ

**ವಿಷಯ** : ಸರ್ಕಾರಿ ಜಮೀನು ಸಂರಕ್ಷಣಾ ಕಾರ್ಯಪಡೆಯ ಕಾರ್ಯ ಚಟುವಟಿಕೆಗಳ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 556 ಎಲ್‌ಜಿಬಿ 2009, ದಿ:19.09.2009.
2) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 556 ಎಲ್‌ಜಿಬಿ 2009, ದಿ:26.09.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶ ದಿ:19.09.2009ರಲ್ಲಿ ಬೆಂಗಳೂರು ನಗರ ಜಿಲ್ಲೆ ಮತ್ತು ಭವಿಷ್ಯದಲ್ಲಿ ರಾಜ್ಯಾದ್ಯಂತ ಇರುವ ಸರ್ಕಾರಿ ಜಮೀನುಗಳ ಸಮೀಕ್ಷೆ, ಒತ್ತುವರಿ ತೆರವುಗೊಳಿಸುವಿಕೆ ಮತ್ತು ಸಂರಕ್ಷಿಸುವುದು ಇತ್ಯಾದಿ ಕಾರ್ಯಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅಗತ್ಯ ನಿರ್ದೇಶನಗಳನ್ನು ನೀಡಲು ಮತ್ತು ಸರ್ಕಾರಿ ಜಮೀನಿನ ಸಂರಕ್ಷಣೆಯ ಮೇಲ್ವಿಚಾರಣೆ ಮತ್ತು ಉಸ್ತುವಾರಿಗಾಗಿ ಶ್ರೀ ವಿ. ಬಾಲಸುಬ್ರಮಣಿಯನ್, ಭಾ.ಆ.ಸೇ., (ನಿವೃತ್ತ) ಇವರ ಅಧ್ಯಕ್ಷತೆಯಲ್ಲಿ ಸರ್ಕಾರಿ ಜಮೀನು ಸಂರರಕ್ಷಣಾ ಕಾರ್ಯಪಡೆಯನ್ನು ರಚಿಸಲಾಗಿರುತ್ತದೆ. ಸದರಿ ಕಾರ್ಯಪಡೆಗೆ ಈ ಕೆಳಕಂಡ ಪ್ರಮುಖ ಕಾರ್ಯಗಳನ್ನು ನಿರ್ವಹಿಸಲು ಸೂಚಿಸಲಾಗಿರುತ್ತದೆ.

1) ಸರ್ಕಾರಿ ಜಮೀನುಗಳ ಭೂ ಕಬಳಿಕೆ ಮತ್ತು ಅವ್ಯವಹಾರದ ಬಗ್ಗೆ ಜಂಟಿ ಸದನ ಸಮಿತಿ ಸಂಗ್ರಹಿಸಿದ ಮಾಹಿತಿಯನ್ವಯ ಸರ್ಕಾರಿ ಜಮೀನುಗಳ ಒತ್ತುವರಿ ತೆರವುಗೊಳಿಸಲು ಕಂದಾಯ ಇಲಾಖೆಗೆ, ಇತರೆ ಸರ್ಕಾರಿ ಇಲಾಖೆಗಳಿಗೆ ಮತ್ತು ಶಾಸನಬದ್ಧ ಸಂಸ್ಥೆಗಳು ಮತ್ತು ಮಂಡಳಿಗಳಿಗೆ ಅಗತ್ಯ ನಿರ್ದೇಶನ ನೀಡುವುದು ಹಾಗೂ ಈ ಕಾರ್ಯದಲ್ಲಿ ಸರ್ಕಾರದೊಂದಿಗೆ ಸಮನ್ವಯ ಕಾರ್ಯ ನಿರ್ವಹಿಸವುದು.

2) ಬೆಂಗಳೂರು ನಗರ ಜಿಲ್ಲೆ ವ್ಯಾಪ್ತಿಯಲ್ಲಿ ಸರ್ಕಾರಿ ಭೂ ಕಬಳಿಕೆ ಗುರ್ತಿಸಿದ ಮಾದರಿಯಲ್ಲಿಯೇ ರಾಜ್ಯದ ಇತರೆ ಜಿಲ್ಲೆಗಳಲ್ಲಿ ಕಂದಾಯ, ಇತರೆ ಸರ್ಕಾರಿ ಇಲಾಖೆಗಳ ಮತ್ತು ಶಾಸನಬದ್ಧ ಸಂಸ್ಥೆಗಳು/ ಮಂಡಳಿಗಳ ಜಮೀನುಗಳ ಒತ್ತುವರಿಯನ್ನು ಗುರ್ತಿಸುವ, ತೆರವುಗೊಳಿಸುವ ಮತ್ತು ಸಂರಕ್ಷಿಸುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಲು ಸರ್ಕಾರ ಹಾಗೂ ಸಂಬಂಧಪಟ್ಟ ಇಲಾಖೆಗಳೊಂದಿಗೆ ಸಮನ್ವಯ ಕಾರ್ಯ ನಿರ್ವಹಿಸುವುದು.

3) ಭೂ ಕಬಳಿಕೆ ತೆರವುಗೊಳಿಸುವ ಪ್ರಕ್ರಿಯೆಯಲ್ಲಿ ಉಂಟಾಗಬಹುದಾದ ನ್ಯಾಯಾಲಯ ಪ್ರಕರಣಗಳು ಮತ್ತು ಕಾನೂನು ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರಿ ವಕೀಲರು ಮತ್ತು ವಿಶೇಷ ಸರ್ಕಾರಿ ವಕೀಲರುಗಳನ್ನು ನೇಮಿಸಿಕೊಳ್ಳುವ ಬಗ್ಗೆ ಇಲಾಖೆಗಳಿಗೆ ನಿರ್ದೇಶನ ನೀಡುವುದು ಮತ್ತು ಈ ಪ್ರಕ್ರಿಯೆ ಕಾರ್ಯಗತವಾಗಲು ಸರ್ಕಾರದ ಆದೇಶಗಳನ್ನು ಪಡೆದುಕೊಳ್ಳಲು ಸಮನ್ವಯ ಸಾಧಿಸುವುದು.

4) ಭೂ ಕಬಳಿಕೆಯಿಂದ ಮುಕ್ತಗೊಳಿಸಿದ ಸರ್ಕಾರಿ ಮತ್ತು ಇವರ ಶಾಸನಬದ್ಧ ಸಂಸ್ಥೆಗಳ ಮತ್ತು ಮಂಡಳಿಗಳ ಜಮೀನುಗಳ ಬಳಕೆ ಬಗ್ಗೆ ಹಾಗೂ ಅವಶ್ಯಕತೆ ಇವರು ಸರ್ಕಾರಿ ಇಲಾಖೆ, ಶಾಸನಬದ್ಧ ಸಂಸ್ಥೆ / ಮಂಡಳಿಗಳಿಗೆ ಜಮೀನು ಮಂಜೂರಾತಿ ನೀಡುವ ಬಗ್ಗೆ ಸಲಹೆ ನೀಡುವುದು.

5) ಭೂ ಕಬಳಿಕೆ ಹೂಡಿದ ಮೊಕದ್ದಮೆಗಳ ಬಗ್ಗೆ ಮತ್ತು ವಿವಿಧ ನ್ಯಾಯಾಲಯಗಳಲ್ಲಿ ನಡೆದಿರುವ ಪ್ರಕರಣಗಳ ಬಗ್ಗೆ ಕಾಲ ಕಾಲಕ್ಕೆ ಪಾರಾಮರ್ಶೆ ಮಾಡುವುದು.

6) ಸರ್ಕಾರಿ ಜಮೀನುಗಳ ಭೂ ಕಬಳಿಕೆಯಲ್ಲಿ ಶಾಮೀಲಾದ ಸರ್ಕಾರಿ ಅಧಿಕಾರಿಗಳು, ನೌಕರರು ಹಾಗೂ ಸಾರ್ವಜನಿಕ ವಿರುದ್ಧ ಕ್ರಿಮಿನಲ್ ಮೊಕದ್ದಮೆಗಳನ್ನು ಹೂಡುವ ಬಗ್ಗೆ ಸೂಚನೆ ನೀಡುವುದು ಮತ್ತು ಈ ಸಂಬಂಧದಲ್ಲಿ ಪರಾಮರ್ಶೆ–ಸಭೆ ನಡೆಸುವುದು.

7) ಭವಿಷ್ಯದಲ್ಲಿ ಭೂ ಕಬಳಿಕೆ ತಡೆಯುವ ಬಗ್ಗೆ ಕೈಗೊಳ್ಳಬೇಕಾದ ಕಾನೂನು ಮತ್ತು ಇತರೆ ಕ್ರಮಗಳ ಬಗ್ಗೆ ಇಲಾಖೆಗಳಿಗೆ ನಿರ್ದೇಶನ ನೀಡುವುದು ಮತ್ತು ಸರ್ಕಾರದೊಂದಿಗೆ ಸಮನ್ವಯ ಸಾಧಿಸುವುದು.

8) ಕರ್ನಾಟಕ ಭೂ ಕಬಳಿಕೆ (ನಿಷೇಧ) ಕಾಯ್ದೆ, 2007ನ್ನು ಕಾರ್ಯರೂಪಕ್ಕೆ ತರುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳುವುದು.

9) ನೊಂದಣಿ ಇಲಾಖೆಯಲ್ಲಿ ದಾಖಲೆಗಳ ನೋಂದಣಿಗೆ ಸಂಬಂಧಪಟ್ಟಂತೆ "Torrens System of registration of title" ಪದ್ಧತಿಯನ್ನು ಕಾರ್ಯರೂಪಕ್ಕೆ ತರುವುದು.

10) ಬೆಂಗಳೂರು ನಗರ ಜಿಲ್ಲೆಯಲ್ಲಿ ಮತ್ತು ಇತರ ಜಿಲ್ಲೆಗಳಲ್ಲಿರುವ ಸರ್ಕಾರಿ ಜಮೀನುಗಳ ಬಳಕೆ ಬಗ್ಗೆ ಬೃಹತ್ ಯೋಜನೆ ಸಿದ್ಧಗೊಳಿಸುವುದು.

11) ಈಗಾಗಲೇ ಅಸ್ತಿತ್ವದಲ್ಲಿರುವ ಸಾರ್ವಜನಿಕ ಜಮೀನುಗಳ ನಿಗಮದ ಕಾರ್ಯನಿರ್ವಹಣೆಗೆ ಸಂಬಂಧಪಟ್ಟಂತೆ ಸಲಹೆ ಸೂಚನೆಗಳನ್ನು ನೀಡುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸರ್ಕಾರದ ಆದೇಶ ದಿ: 26.09.2009ರಲ್ಲಿ ಸರ್ಕಾರಿ ಜಮೀನು ಸಂರಕ್ಷಣಾ ಕಾರ್ಯಪಡೆಯ ಅಧ್ಯಕ್ಷರಾದ ಶ್ರೀ ವಿ. ಬಾಲಸುಬ್ರಮಣಿಯನ್, ಭಾ.ಆ.ಸೇ., (ನಿವೃತ್ತ) ಇವರ ವೇತನ ಮತ್ತಿತರ ಸೌಲಭ್ಯಗಳ ಕುರಿತು ನೇಮಕಾತಿ ಷರತ್ತುಗಳನ್ನು

ಹೊರಡಿಸಲಾಗಿರುತ್ತದೆ. ಸರ್ಕಾರಿ ಜಮೀನು ಸಂರಕ್ಷಣಾ ಕಾರ್ಯಪಡೆಯು ಸರ್ಕಾರಿ ಜಮೀನುಗಳ ಒತ್ತುವರಿ ಬಗ್ಗೆ ಆಗ್ಗಿಂದಾಗೆ ಸಭೆಗಳನ್ನು ನಡೆಸುತ್ತಿದ್ದು, ಪರಿಪೂರ್ಣ ವರದಿಯನ್ನು ಈವರೆಗೆ ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ.

ಆದ್ದರಿಂದ ಸದರಿ ಸಂರಕ್ಷಣಾ ಕಾರ್ಯಪಡೆಯ ಕಾರ್ಯಾವಧಿಯನ್ನು ವಿಸ್ತರಿಸುವ ಬಗ್ಗೆ ಪರಿಶೀಲಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 897 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ: 04–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಜಮೀನು ಸಂರಕ್ಷಣಾ ಕಾರ್ಯಪಡೆಯ ಕಾಲಾವಧಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 6 ತಿಂಗಳವರೆಗೆ ವಿಸ್ತರಿಸಲಾಗಿದೆ. ಈ ಅವಧಿಯೊಳಗಾಗಿ ಕಾರ್ಯಪಡೆಯು ಸಂಪೂರ್ಣ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ).

ಪಿ.ಆರ್ 184

## ಕಂದಾಯ ಸಚಿವಾಲಯ

## ತಿದ್ದುಪಡಿ ಆದೇಶ

ಸಂಖ್ಯೆ: ಕಂಇ 104 ಮುಆಬಿ 2010. ಬೆಂಗಳೂರು, ದಿನಾಂಕ: 28–12–2010

**ಪ್ರಸ್ತಾವನೆ:**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಎಂಇಟಿ 2003 ದಿನಾಂಕ: 30.04.2003ರ ಅಧಿಸೂಚಿತ ಪಟ್ಟಿಯ ಪುಟ ಸಂಖ್ಯೆ: 405, ಕ್ರಮ ಸಂಖ್ಯೆ: 61 ರಲ್ಲಿ **"ಹಿರೇಬೆಳಗುಡಿ ಎಲ್ಲಮ್ಮ ದೇವರ ದೇವಸ್ಥಾನ"** ಎಂಬ ಪದಗಳ ಬದಲಾಗಿ **"ಎಳ್ಳೇಶಪುರ ಗ್ರಾಮ ಶ್ರೀ ಎಳ್ಳುಲಿಂಗೇಶ್ವರ ದೇವಸ್ಥಾನ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್.ಎಸ್ ಶ್ರೀಕಂಠಬಾಬು**
ಪೀಠಾಧಿಕಾರಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್ 185

## ಕಂದಾಯ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಪರೀಕ್ಷಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 216 ಮುಸೇವಿ 2007 ದಿನಾಂಕ 6.11.2007

2) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ 13/ಸಿಆರ್ 42/10–11/ದಿ: 6.12.2010

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಪರೀಕ್ಷಾ ಸಮಿತಿಯನ್ನು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ದಿನಾಂಕ 6.11.2007ರಿಂದ ಮೂರು ವರ್ಷಗಳ ಅವಧಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಅಧ್ಯಕ್ಷರು | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 2 | ಸದಸ್ಯ–ಕಾಯದರ್ಶಿ | ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು. |
| 3 | ಸದಸ್ಯರು | ಪ್ರಾಚಾರ್ಯರು, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು. |
| 4 | ಸದಸ್ಯರು | ಶೈವಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 5 | ಸದಸ್ಯರು | ವೈಖಾನಾಸಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 6 | ಸದಸ್ಯರು | ಪಾಂಚರಾತ್ರಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 7 | ವಿಶೇಷ ಆಹ್ವಾನಿತರು | ಬೇರೆಯವರ ಅವಶ್ಯಕತೆ ಇದ್ದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ವಿಶೇಷ ಆಹ್ವಾನಿರನ್ನು ಆಹ್ವಾನಿಸಬಹುದು. |

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಪರೀಕ್ಷಾ ಸಮಿತಿಯ ವತಿಯಿಂದ ಕಳೆದ ಮೂರು ವರ್ಷಗಳು ವಿವಿಧ ಆಗಮ ಪ್ರವರ ಮತ್ತು ಪ್ರವೀಣ ಪರೀಕ್ಷೆಗಳನ್ನು ಸುಸೂತ್ರವಾಗಿ ನಡೆಸಿರುತ್ತದೆ ಹಾಗೂ ಇದರ ಫಲಿತಾಂಶವು

ಸಹ ಉತ್ತಮವಾಗಿರುತ್ತದೆ. ಈ ಸಮಿತಿಯ ಅವಧಿಯು ದಿ:5.11.2010ಕ್ಕೆ ಮುಕ್ತಾಯಗೊಂಡಿರುತ್ತದೆ. 2010–11ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ವಿವಿಧ ಆಗಮ ಪ್ರವರ ಮತ್ತು ಪ್ರವೀಣ ಪರೀಕ್ಷೆಗಳನ್ನು ಮಾರ್ಚ್ 2011ರಲ್ಲಿ ನಡೆಸಬೇಕಾಗಿದ್ದು, ಪರೀಕ್ಷೆಗಳ ಪ್ರಕ್ರಿಯೆಗಳು ಡಿಸೆಂಬರ್ 2010ರಿಂದ ಪ್ರಾರಂಭಿಸಬೇಕಾಗಿರುತ್ತದೆ. ಆದ್ದರಿಂದ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಪರೀಕ್ಷಾ ಸಮಿತಿಯ ಅವಧಿಯನ್ನು ದಿ: 6.11.2010ರಿಂದ ಮುಂದಿನ ಮೂರು ವರ್ಷಗಳ ಅವಧಿಗೆ ಮುಂದುವರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 216 ಮುಸೇವಿ 2007, ಬೆಂಗಳೂರು, ದಿನಾಂಕ: 4–1–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಪರೀಕ್ಷಾ ಸಮಿತಿಯನ್ನು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ದಿನಾಂಕ 6.11.2010ರಿಂದ ಮುಂದಿನ ಮೂರು ವರ್ಷಗಳ ಅವಧಿಗೆ ಮುಂದುವರಿಸಿ ಆದೇಶಿಸಿದೆ.

| | | |
|---|---|---|
| 1 | ಅಧ್ಯಕ್ಷರು | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 2 | ಸದಸ್ಯ–ಕಾರ್ಯದರ್ಶಿ | ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು. |
| 3 | ಸದಸ್ಯರು | ಪ್ರಾಚಾರ್ಯರು, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು. |
| 4 | ಸದಸ್ಯರು | ಶೈವಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 5 | ಸದಸ್ಯರು | ವೈಖಾನಾಸಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 6 | ಸದಸ್ಯರು | ಪಾಂಚರಾತ್ರಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 7 | ವಿಶೇಷ ಆಹ್ವಾನಿತರು | ಬೇರೆಯವರ ಅವಶ್ಯಕತೆ ಇದ್ದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ವಿಶೇಷ ಆಹ್ವಾನಿತರನ್ನು ಆಹ್ವಾನಿಸಬಹುದು. |

ಮೇಲ್ಕಂಡ ಸಮಿತಿಯು ವಿದ್ಯಾರ್ಥಿಗಳ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವ ಹಿನ್ನೆಲೆಯಲ್ಲಿ ಪಠ್ಯಕ್ರಮಗಳನ್ನು ರಚಿಸುವುದು. ಆಗಮ ಬೋಧನಾ ವಿಧಾನ, ಆಗಮಿಕ ಶಿಕ್ಷಣ ನೀಡುವ ಬಗ್ಗೆ ಮೇಲುಸ್ತುವಾರಿಯನ್ನು ನೋಡಿಕೊಳ್ಳುವುದು, ಪರೀಕ್ಷೆಗಳ ಅವಶ್ಯಕತೆ ತಕ್ಕಂತೆ ಪ್ರಶ್ನೆ ಪತ್ರಿಕೆಗಳನ್ನು ಸಿದ್ಧಪಡಿಸುವುದು, ಉತ್ತಮ ರೀತಿಯಲ್ಲಿ ಮೌಲ್ಯಮಾಪನ ಮಾಡುವುದು, ಇಡೀ ಪರೀಕ್ಷಾ ಪ್ರಕ್ರಿಯೆಯಲ್ಲಿ ಯಾವುದೇ ರೀತಿಯ ಲೋಪದೋಷಗಳು / ನ್ಯೂನತೆಗಳು / ದೂರುಗಳು ಬಾರದಂತೆ ಕಟುನಿಟ್ಟಾಗಿ ಎಚ್ಚರವಹಿಸಿ ಯಾವುದೇ ರೀತಿಯಲ್ಲೂ ಪರೀಕ್ಷಾ ಪ್ರಕ್ರಿಯೆಗಳು ಬಹಿರಂಗವಾಗದಂತೆ ಗೌಪ್ಯವಾಗಿ ಕರ್ತವ್ಯ ನಿಷ್ಠೆ (integrity) ಇರುವಂತಹ ಸಿಬ್ಬಂದಿಯವರನ್ನು ಮಾತ್ರ ಪರೀಕ್ಷಾ ಪ್ರಕ್ರಿಯೆಗೆ ನೇಮಿಸಿಕೊಂಡು ಇದರ ನಿಯಮಾವಳಿಗಳ ಅಡಿಯಲ್ಲಿ ಪರೀಕ್ಷೆಗಳನ್ನು ನಡೆಸಿ, ಆಗಮ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವ ಹಿತದೃಷ್ಟಿಯಿಂದ ಫಲಿತಾಂಶವನ್ನು ಪ್ರಕಟಿಸುವುದು ಈ ಸಮಿತಿಯ ಮುಖ್ಯ ಜವಾಬ್ದಾರಿಯಾಗಿರುತ್ತದೆ.

ಪರೀಕ್ಷಾ ಪ್ರಕ್ರಿಯೆಯಲ್ಲಿ ನಿಯಮಾನುಸಾರ ಸಂಭಾವನೆಯನ್ನು ನೀಡಲು ಹಾಗೂ ಎಲ್ಲಾ ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳಲು ಈ ಸಮಿತಿಯು ಕಾರ್ಯನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ರಾಮಚಂದ್ರಯ್ಯ**

ಪಿ.ಆರ್ 186

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ(ಮುಜರಾಯಿ)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಜಿ. ಎಂ. ರಾಮಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಬಿಡಿ–18/ಸಿಆರ್–04/2010, ಕೋಲಾರ, ದಿನಾಂಕ : 02–09–2010.
2. ತನಿಖಾಧಿಕಾರಿಯವರ ವರದಿ ದಿನಾಂಕ : 29–07–2010.
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಜಿ. ಎಂ. ರಾಮಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ : 04/2010 ರಲ್ಲಿ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಕೋಲಾರ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ : (1) ರ ಪತ್ರ ದಿನಾಂಕ : 02–09–2010ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ : 02–09–2010ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1. ಶ್ರೀ ಎ. ಎಸ್. ನಾಗರಾಜ್, ಬಿನ್. ಲೇಟ್ : ಎ. ಎಸ್. ಸತ್ಯನಾರಾಯಣ, ವಯಸ್ಸು 38 ವರ್ಷ, ನಂ. 1907, ಬ್ರಾಹ್ಮಣರ ಬೀದಿ, ಹಳೇ ಅಂಚೆ ಕಛೇರಿರವರ ದೂರು ದಿನಾಂಕ : 17–04–2009.
2. ಪ್ರಥಮ ವರ್ತಮಾನ ವರದಿ : ಕೋಲಾರ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ : 04/2010.
3. ಪ್ರಾಯೋಗಿಕ ಪಂಚನಾಮೆ ದಿನಾಂಕ : 17–04–2010
4. ಟ್ರ್ಯಾಪ್‌ನ ಮಹಜರ್ ದಿನಾಂಕ : 17–04–2010
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಸಾ.ಆ.ಸಂ./ರಾ.ಪ./ಲೋಕ್/22/10–11 ದಿನಾಂಕ : 21–05–2010.
6. ಕೃತ್ಯ ನಡೆದ ಸ್ಥಳದ ನಕಾಶೆ :
7. **ಸಾಕ್ಷಿ ಹೇಳಿಕೆಗಳ ಪಟ್ಟಿ :**

1. ಎ. ಎಸ್. ನಾಗರಾಜ ಫಿರ್ಯಾದಿ
2. ಶ್ರೀ ಟಿ. ಎಂ. ನಾರಾಯಣ ರಾವ್ ಬಿನ್. ಲೇಟ್ : ಮಾಧವ ರಾವ್, ಪ್ರ.ದ.ಸ. ಜಿಲ್ಲಾ ಖಜಾನೆ, ಕೋಲಾರ.
3. ಶ್ರೀ ಅನ್ವರ್ ಪಾಷ, ಶೀಘ್ರಲಿಪಿಗಾರ, ಜಿಲ್ಲಾ ಕೈಗಾರಿಕಾ ಕೇಂದ್ರ, ಕೋಲಾರ.
4. ಶ್ರೀ ವಿ. ರಘುನಾಥ್ ಬಿನ್. ವಾಸುದೇವನ್, ಅಕೌಂಟೆಂಟ್, ಶ್ರೀ ನಾಗರಾಜ್ ಹಾರ್ಡ್‌ವೇರ್ ಅಂಗಡಿ, ದೊಡ್ಡಪೇಟೆ, ಕೋಲಾರ.
5. ಶ್ರೀಮತಿ ಡಿ. ರಾಧಿಕಾ ಕೋಂ. ಎನ್. ಮುನಿಕೃಷ್ಣ, ವಾಣಿಜ್ಯ ತೆರಿಗೆ ಪರಿವೀಕ್ಷಕರು ವಾಣಿಜ್ಯ ತೆರಿಗೆ ಅಧಿಕಾರಿ (ವಸೂಲಿ)ರವರ ಕಛೇರಿ, ಕುರುಬರ ಪೇಟೆ, ಕೋಲಾರ.
6. ಶ್ರೀ ನಾಗಭೂಷಣ, ದ್ವಿ.ದ.ಸ., ವಾಣಿಜ್ಯ ತೆರಿಗೆ ಅಧಿಕಾರಿ (ವಸೂಲಿ)ರವರ ಕಛೇರಿ, ಕುರುಬರ ಪೇಟೆ, ಕೋಲಾರ.
7. ಶ್ರೀ ಮುಸ್ತಾಕ್ ಅಹಮದ್, ಜ್ಯೂನಿಯರ್ ಎಂಜಿನಿಯರ್, ಲೋಕೋಪಯೋಗಿ ಇಲಾಖೆ, ಕೋಲಾರ ಉಪ ವಿಭಾಗ, ಕೋಲಾರ.
8. ಶ್ರೀ ಬಸವರಾಜ್ ಗೋವಿನ ಗಿಡದ್, ಸಹಾಯಕ ರಾಸಾಯನಿಕ ಪರೀಕ್ಷಾ ತಜ್ಞರು, ಬೆಂಗಳೂರು.
9. ಶ್ರೀ ಕೃಷ್ಣಪ್ಪ ಹೆಚ್. ಸಿ., ಕರ್ನಾಟಕ ಲೋಕಾಯುಕ್ತ ಕಛೇರಿ, ಕೋಲಾರ ಜಿಲ್ಲೆ.
10. ಶ್ರೀ ವಿಜಯಕುಮಾರ್ ಪಿ.ಸಿ., ಕರ್ನಾಟಕ ಲೋಕಾಯುಕ್ತ ಕಛೇರಿ, ಕೋಲಾರ ಜಿಲ್ಲೆ.
11. ಶ್ರೀ ನರಸಿಂಹಯ್ಯ ಪಿ.ಸಿ., ಕರ್ನಾಟಕ ಲೋಕಾಯುಕ್ತ ಕಛೇರಿ, ಕೋಲಾರ ಜಿಲ್ಲೆ.
12. ಶ್ರೀ ಬಸವರಾಜ್ ಪಿ.ಸಿ., ಕರ್ನಾಟಕ ಲೋಕಾಯುಕ್ತ ಕಛೇರಿ, ಕೋಲಾರ ಜಿಲ್ಲೆ.
13. ಶ್ರೀ ಎಸ್.ಎಸ್. ಅಲಮೇಲಕರ್, ಪೊಲೀಸ್ ಉಪಾಧೀಕ್ಷಕರು, ಕೆ.ಎಲ್.ಎ., ಕೋಲಾರ.
14. ಶ್ರೀ ಎಸ್. ಮಂಜುನಾಥ, ಪೊಲೀಸ್ ಇನ್ಸ್‌ಪೆಕ್ಟರ್, ಕೆ.ಎಲ್.ಎ., ಕೋಲಾರ.

ಫಿರ್ಯಾದುದಾರರಾದ ಶ್ರೀ ಎ. ಎಸ್. ನಾಗರಾಜ್ ಬಿನ್ ಲೇಟ್ : ಎ. ಎಸ್. ಸತ್ಯನಾರಾಯಣರವರು ಕೋಲಾರದ ದೊಡ್ಡಪೇಟೆಯಲ್ಲಿ ಹಾರ್ಡ್‌ವೇರ್ ಅಂಗಡಿಯನ್ನು ಇಟ್ಟುಕೊಂಡಿದ್ದು, ಅದರ ವ್ಯವಹಾರದ ಬಗ್ಗೆ ಆಡಿಟ್ ಮಾಡಲು ಅಂಗಡಿಯ ಲೆಕ್ಕ ಪುಸ್ತಕಗಳು, ಸೇಲ್ ಬಿಲ್ಲು, ರಸೀದಿಗಳು, ಡೆಲಿವರಿ ಚಲನ್‌ಗಳು, ವ್ಯಾಟ್ 100 ಫಾರಂಗಳು ಹಾಗೂ ಸಂಬಂಧಪಟ್ಟ ಬ್ಯಾಲೆನ್ಸ್‌ಶೀಟ್‌ಅನ್ನು ಹಾಜರುಪಡಿಸಲು ನೋಟೀಸನ್ನು ನೀಡಿದ್ದು, ಅದರಂತೆ ಫಿರ್ಯಾದುದಾರರು ಸಂಬಂಧಪಟ್ಟ ದಾಖಲಾತಿಗಳನ್ನು ವಾಣಿಜ್ಯ ತೆರಿಗೆ ಅಧಿಕಾರಿಗಳು (ವಸೂಲಿ), ಕೋಲಾರರವರಲ್ಲಿ ಹಾಜರುಪಡಿಸಿರುತ್ತಾರೆ. ನಂತರ ಸದರಿ ಅಧಿಕಾರಿಗಳು ದಿನಾಂಕ : 17–03–2010 ರಂದು ಪ್ರಪೋಸಲ್ ನೋಟೀಸನ್ನು ಫಿರ್ಯಾದುದಾರರಿಗೆ ನೀಡಿ, ಅದರಲ್ಲಿ ರೂ. 1,18,705/– ಗಳನ್ನು ವಾಣಿಜ್ಯ ತೆರಿಗೆ ಪಾವತಿಸಬೇಕೆಂದು ತಿಳಿಸಿರುತ್ತಾರೆ. ಅದಕ್ಕೆ ಫಿರ್ಯಾದುದಾರರು ದಿನಾಂಕ : 25–03–2010 ರಂದು ಅಧಿಕಾರಿಯವರನ್ನು ಭೇಟಿಯಾಗಿ ನೋಟಿಸಿನಲ್ಲಿ ತಿಳಿಸಿದ ಬಾಕಿ ತೆರಿಗೆ ಹೆಚ್ಚಾಗಿದ್ದು, ಯಾವುದೇ ಬಾಕಿ ಹಣ ಉಳಿಸಿಕೊಂಡಿರುವುದಿಲ್ಲ. ಮತ್ತೊಮ್ಮೆ ದಾಖಲಾತಿಗಳನ್ನು ಪರಿಶೀಲಿಸಲು ಕೋರಿ, ಮತ್ತಷ್ಟು ದಾಖಲಾತಿಗಳನ್ನು ಹಾಜರುಪಡಿಸಿರುತ್ತಾರೆ. ಇದರ ಸಂಬಂಧ ದಿನಾಂಕ : 17–04–2010 ರಂದು ಮತ್ತೆ ಫಿರ್ಯಾದುದಾರರು ಶ್ರೀ ಜಿ. ಎಂ. ರಾಮಣ್ಣ, ವಾಣಿಜ್ಯ ತೆರಿಗೆ ಅಧಿಕಾರಿರವರನ್ನು ಭೇಟಿ ಮಾಡಿ, ರೂ. 40,000/– ಗಳನ್ನು ಕೊಟ್ಟರೆ ನಿಮ್ಮ ತೆರಿಗೆ ಬಾಕಿಯನ್ನು ಸುಮಾರು 19,000/– ಗಳಿಗೆ ಮುಗಿಸಿಕೊಡುತ್ತೇನೆಂದು ಹೇಳಿ, ರೀ ಅಸೆಸ್‌ಮೆಂಟ್ ಕಾಪಿಯನ್ನು ಬೆರಳಚ್ಚು ಮಾಡಿಸಿ, ಫಿರ್ಯಾದುದಾರರಿಗೆ ತೋರಿಸಿ, ಸಹಿ ಮಾಡದೇ ಅವರ ಬಳಿಯೇ ಇಟ್ಟುಕೊಂಡು ಲಂಚದ ಹಣಕ್ಕೆ ಒತ್ತಾಯ ಮಾಡಿರುತ್ತಾರೆ. ಈ ಸಂಬಂಧ ಫಿರ್ಯಾದಿಯವರಿಗೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ್ದರಿಂದ ಸೂಕ್ತ ಕಾನೂನು ರೀತ್ಯ ಕ್ರಮಕ್ಕೆ ಕೋರಿರುತ್ತಾರೆ.

ಸದರಿ ದೂರನ್ನು ಆಧರಿಸಿ, ಕೋಲಾರ ಲೋಕಾಯುಕ್ತ ಪೊಲೀಸ್ ರವರು ಆರೋಪಿ ಸರ್ಕಾರಿ ನೌಕರರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2) ರ ಪ್ರಕಾರ ಕೋಲಾರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ : 04/2010 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ : 17–04–2010 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಸದರಿ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಜಿ. ಎಂ. ರಾಮಣ್ಣ ವಾಣಿಜ್ಯ ತೆರಿಗೆ ಅಧಿಕಾರಿ, (ವಸೂಲಿ), ಕೋಲಾರ, ಇವರು ನೆರಳು ಸಾಕ್ಷಿದಾರರ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ. 40,000–00ನ್ನು ಆರೋಪಿತರು ಧರಿಸಿದ್ದ ಪ್ಯಾಂಟಿನ ಬಲ ಜೇಬಿನಿಂದ ವಶಪಡಿಸಿಕೊಳ್ಳಲಾಗಿದೆ. ನಡೆದ ಘಟನೆಯ ಬಗ್ಗೆ ಫಿರ್ಯಾದಿ ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ ದೃಢಪಡಿಸಿರುತ್ತಾರೆ. ಸದರಿ ಆರೋಪಿತರನ್ನು ದಸ್ತಗಿರಿ ಮಾಡಿ, ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರುಪಡಿಸಿರುತ್ತಾರೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯ ನಡೆದ ಸ್ಥಳದ ನಕ್ಷೆ, ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ

ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಜಿ. ಎಂ. ರಾಮಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಜಿ. ಎಂ. ರಾಮಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 28 ವಾತೆತ 2010, ಬೆಂಗಳೂರು, ದಿನಾಂಕ: 28–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಆರ್. ಚಂದ್ರಶೇಖರಾರಾಧ್ಯ, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀ ಜಿ. ಎಂ. ರಾಮಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ, ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ : 28–12–2010 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಆರ್. ಚಂದ್ರಶೇಖರಾರಾಧ್ಯ**

ಪಿ.ಆರ್.131

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಓ. ಕಸ್ತೂರಪ್ಪ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು ಮತ್ತು ಶ್ರೀ ಮಂಜುನಾಥ ಸ್ವಾಮಿ, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ : ಡಿಎ/ಜಿಎಜಡ್/ಸಿಆರ್–08/10–11, ದಿನಾಂಕ : 26–08–2010.

**ಪ್ರಸ್ತಾವನೆ :**

ಶ್ರೀ ಓ. ಕಸ್ತೂರಪ್ಪ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, ಇವರು ಶಿವಮೊಗ್ಗದ ಜಾರಿ ಮತ್ತು ವಸೂಲಿ ವಿಭಾಗದ ಜಂಟಿ ಆಯುಕ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮತ್ತು ಶಿವಮೊಗ್ಗದ ಮೌಲ್ಯವರ್ಧಿತ ತೆರಿಗೆ ವಿಭಾಗದ ಜಂಟಿ ಆಯುಕ್ತರಾಗಿ ಈಗ ಕರ್ತವ್ಯ ನಿರ್ವಹಿಸುತ್ತಿದ್ದು, ಇಲಾಖೆಯಲ್ಲಿ ಮಾರಾಟ ತೆರಿಗೆ ಪದ್ಧತಿಯಿಂದ ಮೌಲ್ಯವರ್ಧಿತ ತೆರಿಗೆ ಪದ್ಧತಿ ಅಳವಡಿಸಿಕೊಂಡಾಗ, ಮಾರಾಟ ತೆರಿಗೆ ಭರಣಕೊಂಡ ಹಾಗೂ ದಿನಾಂಕ : 01–04–2005 ರಂದು ವರ್ತಕರು ಹೊಂದಿರುವ ಆರಂಭಿಕ ಶಿಲ್ಕು ದಾಸ್ತಾನುಗಳಿಗೆ ಎಲ್.ವಿ.ಓ/ವಿಎಸ್.ಓ/ಲೆಕ್ಕಪರಿಶೋಧನೆ ಅಧಿಕಾರಿಗಳು ಮಧ್ಯಂತರ ಪರಿಹಾರ ನೀಡಿ, ಆದೇಶಿಸಿದ ಪ್ರಕರಣಗಳಲ್ಲಿ ಸ್ವಯಂ ಪರಿಷ್ಕರಣೆಗೆ ಒಳಪಡಿಸಲು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ 2003 ಕಲಂ 63–ಎ ಕೆಳಗೆ ಕ್ರಮ ಕೈಗೊಂಡು, ನೋಟೀಸು ಜಾರಿ ಮಾಡಿ, ಅಂತಹ ಪ್ರಕರಣಗಳಲ್ಲಿ ಒಂದು ವರ್ಷದೊಳಗೆ ನಡಾವಳಿಗಳನ್ನು ಪೂರ್ಣಗೊಳಿಸಬೇಕೆಂದು ತಿಳಿದಿದ್ದರೂ ಅವರ ಕಛೇರಿಯ ಪರಿವೀಕ್ಷಕರಾದ ಶ್ರೀ ಆರ್. ಎಂ. ಮಂಜುನಾಥಸ್ವಾಮಿ ಅವರೊಂದಿಗೆ ಶಾಮೀಲಾಗಿ ಸ್ವಯಂ ಪರಿಷ್ಕರಣಾ ಆದೇಶಗಳನ್ನು ನಿಗಧಿತ ಅವಧಿಯೊಳಗೆ ಹೊರಡಿಸದೇ ಒಟ್ಟು ರೂ. 3,88,080/– ರಾಜಸ್ವ ಶಾಶ್ವತವಾಗಿ ಹಾನಿಯಾಗಲು ಕಾರಣಕರ್ತರಾಗಿರುತ್ತಾರೆ. ಶ್ರೀ ಕಸ್ತೂರಪ್ಪ ಅವರು ಅವರ ಪೂರ್ವಾಧಿಕಾರಿಯವರು ಕಲಂ 63–ಎ ರಡಿಯಲ್ಲಿ ಪೂರ್ಣಗೊಳಿಸಿದ ನಡಾವಳಿಗಳನ್ನು ಅದೇ ಕಲಂ 63–ಎ ಕೆಳಗೆ ಮರುಪಾವತಿಸಿದ ಹೆಚ್ಚುವರಿ ಹೂಡುವಳಿ ತೆರಿಗೆಯನ್ನು ಪುನಃ ಮರುಪಾವತಿಸುವಂತೆ ವರ್ತಕರ ವಿರುದ್ಧ ಅಸಂಬದ್ಧ ಕ್ರಮವನ್ನು ಕೈಗೊಂಡಿದ್ದು, ಅರೆ ನ್ಯಾಯಿಕ ಅಧಿಕಾರಿಯಂತೆ ವರ್ತಿಸಿ, ವಾಣಿಜ್ಯ ತೆರಿಗೆ ಆಯುಕ್ತರು ನೀಡುವ ನಿರ್ದೇಶನಗಳು ತಮಗೆ ಅನ್ವಯಿಸುವುದಿಲ್ಲವೆಂದು, ವಾಣಿಜ್ಯ ತೆರಿಗೆ ಆಯುಕ್ತರ ನಿರ್ದೇಶನಗಳನ್ನು ಧಿಕ್ಕರಿಸಿ ಆದೇಶ ಹೊರಡಿಸಿ, ಕ.ಮೌತೆ. ಕಾಯ್ದೆ ಕಲಂ 59(1)ರ ಕೆಳಗೆ ಆಯುಕ್ತರು ನೀಡಿದ ನಿರ್ದೇಶನಗಳನ್ನು ಉಲ್ಲಂಘಿಸುವ ಮೂಲಕ ಸರ್ಕಾರದ ನೌಕರನಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತಾರೆ. ಅಧಿಕಾರ ವ್ಯಾಪ್ತಿ ಮೀರಿ, ಸದರಿ ಕಾಯ್ದೆಯ ಕಲಂ 63–ಎ ಕೆಳಗೆ ನಡಾವಳಿಗಳನ್ನು ಕೈಗೊಂಡು ಧನಾದೇಶಗಳನ್ನು ಕಡತದಲ್ಲಿ ಗೌಣವಾಗಿ ಇಟ್ಟುಕೊಂಡು ಮತ್ತು ಸ್ವಯಂಪರಿಷ್ಕರಣೆಗಾಗಿ ಸ್ವೀಕರಿಸುವ ಕಡತಗಳ ವಿವರಗಳನ್ನು ದಾಖಲಿಸುವ 'ಜೆ' ವಹಿಯನ್ನು ನಿರ್ವಹಿಸದೇ ತೀವ್ರತರಹದ ದುರ್ನಡತೆ ಎಸಗಿರುತ್ತಾರೆಂದು ವಾಣಿಜ್ಯ ತೆರಿಗೆ ಆಯುಕ್ತರು ಆರೋಪಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3(i) (ii) ಮತ್ತು (iii) ನ್ನು ಉಲ್ಲಂಘಿಸಿರುವುದರಿಂದ ಶಿಸ್ತುಕ್ರಮಕ್ಕೆ ಒಳಪಡುವವರಾಗಿರುತ್ತಾರೆ. ಆದುದರಿಂದ ಸದರಿಯವರ ವಿರುದ್ಧ ಜಂಟಿ ಶಿಸ್ತುಕ್ರಮ ಕೈಗೊಳ್ಳಲು ವಾಣಿಜ್ಯ ತೆರಿಗೆ ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಪ್ರಕರಣದಲ್ಲಿನ ಅಧಿಕಾರಿ/ನೌಕರರ ಪೈಕಿ ಒಬ್ಬರು ಮಾತ್ರ ಗ್ರೂಪ್–ಎ ಅಧಿಕಾರಿಯಾಗಿದ್ದು, ಇವರನ್ನು ಸೇವೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವು ಸರ್ಕಾರವಾಗಿರುತ್ತದೆ. ಈ ಪ್ರಕರಣದಲ್ಲಿ ಒಂದೇ ವ್ಯವಹರಣೆಯ ದೃಷ್ಟಿಯಿಂದ ಈ ಜಂಟಿ ಇಲಾಖಾ ವಿಚಾರಣೆಗೆ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು ಎಂದು ತೀರ್ಮಾನಿಸಿ, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 42 ವಾತೆತ 2010, ಬೆಂಗಳೂರು, ದಿನಾಂಕ : 22–12–2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಮುಂದೆ ತಿಳಿಸಿರುವ ಆಪಾದಿತ ಅಧಿಕಾರಿ/ನೌಕರರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಸ್ಪಷ್ಟವಾದ ದೋಷಾರೋಪಣೆ ಪಟ್ಟಿಯನ್ನು ತಯಾರಿಸಿ ಒಂದೇ ವ್ಯವಹರಣೆಯಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ :

1. ಶ್ರೀ ಓ. ಕಸ್ತೂರಪ್ಪ, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು
2. ಶ್ರೀ ಆರ್. ಎಂ. ಮಂಜುನಾಥಸ್ವಾಮಿ, ವಾಣಿಜ್ಯ ತೆರಿಗೆ ಪರಿವೀಕ್ಷಕರು

ಅಲ್ಲದೆ, ಒಂದೇ ವ್ಯವಹರಣೆಯ ಉದ್ದೇಶಕ್ಕಾಗಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತದೆ. ಕ್ರಮ ಸಂಖ್ಯೆ : 1 ಮತ್ತು 2 ರಲ್ಲಿರುವ ಆಪಾದಿತರುಗಳಿಗೆ ಯಾವುದೇ ದಂಡನೆಯನ್ನು ವಿಧಿಸಲು ಸರ್ಕಾರವು ಅಧಿಕಾರ ಹೊಂದಿರುತ್ತದೆ.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ II, II–ಎ ನಲ್ಲಿ ನಿಗಧಿಪಡಿಸಿರುವ ಕಾರ್ಯ ವಿಧಾನವನ್ನು ಈ ವಿಚಾರಣೆಯಲ್ಲಿ ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

ಪಿ.ಆರ್.132

## URBAN DEVELOPMENT SECRETARIAT

Sub : Extension of the services of contract period of Sri Mohammed Khalander Khan, Transport Planner Sri N Nawaz, Traffic Engineer in Directorate of Urban Land Transport, for one year from 04-01-2011 and 21-12-2010 respectively

Ref : 1. Government Order No. UDD 134 BMR 2006, Dated : 08-03-2007.
2. Government Order No. UDD 134 BMR 2006, Dated : 09-03-2007.
3. Government Order No. UDD 408 BMR 2009, Bangalore Dated : 24-12-2009.

**Preamble:**

As per the recommendation of the National Working Group on Urban Transport for the 11$^{th}$ Plan and the guidelines of the National Urban Transport Policy, the Government of Karnataka in its Government Order read at (1) above has created the State Directorate of Urban Land Transport (DULT), under the Urban Development Department. The key objective of the DULT is to ensure integration and coordination of land-use planning and development of transport related infrastructure in urban areas.

The functions of DULT has been defined in G.O. read at (1) above, with jurisdictions of seven Municipal Corporations in the State, viz., Bangalore, Mysore, Mangalore, Hubli-Dharwad, Belgaum, Gulbarga and Bellary. Accordingly, one of the key functions is to take up Comprehensive Traffic and Transportation Studies [CTTS] for six cities, excluding Bangalore.

The team under the Commissioner, DULT is required to address the above mentioned critical areas on priority. It is noted that addressing these tasks and challenges requires the active role of specicalists with multidisciplinary/approaches. The specialists should have an understanding of the planning, technology for planning, land-use changes, planning with focus on mobility related aspects and capacity building competencies.

Sri Mohammed Khalander Khan and Sri N Nawaz are working as Transport Planner and Traffic Engineer respectively in DULT from 4-1-2010 and 21-12-2009 respectively read at 3 above dated 24-12-2009 with a consolidated monthly salary of Rs. 25,000/- and Rs. 20,000/- respectively.

Now Sri Mohammed Khalander Khan in his letter dated 16-11-2010 has requested for enhancement of his consolidated pay from 25,000/- to 35,000/- and also he has submitted that he would like to continue to work in DULT on contract basis.

Sri N Nawaz, Traffic Engineer in his letter dated 6-11-2010 has requested to enhance his consolidated salary from 20,000/- to 30,000/- and also he has submitted that he would like to continue to work in DULT on contract basis.

After careful evaluation of the work carried out by these Transport Planner and Traffic Engineer. Directorate of Urban Land Transport has considered their request and approved to increase their consolidated salary with an increment by 6% from 4.1.2011 in respect of Sri Mohammed Khalander Khan and from 21-12-2010 in respect of Sri N Nawaz.

Hence the consolidated salary of Sri Mohammed Khalander Khan, Transport Planner will be Rs. 26,500/- per month from 4-1-2011 and that of Sri Nawaz, Traffic Engineer will be Rs. 21,200/- per month from 21-12-2010.

Hence the following Order.

**Government Order No. DULT 368 ADM 2010, Bangalore, Dated: 21-12- 2010**

Government is pleased to accord sanction to utilize the services of Sri Mohammed Khalander Khan as Transport Planner and Sri N Nawaz, Traffic Engineer for a further period of one year from 04-01-2011 and 21-12-2010 respectively in the Directorate of Urban Land Transport on contract basis against the sanctioned post of Transport Planner as per Government Order No. UDD 134 BMR 2006, dated 08-03-2007 with the following conditions :

1. The candidate shall furnish a bond with an undertaking to serve DULT for a period of one year.
2. In case of leaving the Directorate of Urban Land Transport before one year he or she should bring to the notice of Director, Urban Land Transport at least one month earliler.

The services of the Transport Planners will be utilized in the following areas :

1. Preparation of Comprehensive Traffic and Transportation Plan for six city Corporations.
2. Periodic assessment of travel demand in given Urban Area.
3. Determination of level of requirements to public transport and type of transport system on different corridors.
4. Setting of policy guidelines for development of total network in Urban Area.
5. Road Network Planning in the Urban Area.
6. Intensive monitoring certain high priority project of agencies.
7. Formatting new projects rating to Traffic and transportation leading to convergence of works between different agencies.
8. Propose projects under JNNURM.
9. Compilation, collation, updation and maintenance of transport network data. Putting out information for general public on the website.
10. Interacting with BBMP, BDA, BMRDA, BMTC, BARL, Traffic police, KSRTC, BMRCL and Abide.
11. Comprehensive Mobility Plan for Tumkur, Udupi, Shimoga and Davanagere.
12. Parking policy for tier II cities in Karnataka.
13. Bangalore Mobility Indicators 2010-11.
14. Feasibility study for cycle track in the neighbourhood of Madivala lake.
15. Traffic Impact Study of Proposed Special Economic Zones near International Airport, Bangalore.
16. Comprehensive Mobility Plan for cities having more than 2 lakh population in Karnataka.
17. Any other work assigned by the Commissioner, DULT.

In the extended period of one year Sri Mohammed Khalander Khan, Transport Planner would be paid a consolidated lumpsum monthly salary of Rs. 26,500/- per month from 04-01-2011 and Sri N. Nawaz, Traffic Engineer would be paid a consolidated lumpsum monthly salalry of Rs. 21,200/- per month from 21-12-2010. The services of above Transport Planner and Traffic Engineer will be utilized for further period of one year or until such time the Commissioner, DULT deems fit.

By Order and in the name of the Governor of Karnataka,
Sd/-
Commissioner
Directorate of Urban Land Transport
And Ex officio Secretary to Government
Urban Development Department

PR. 133

## ವಸತಿ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ವಇ 21 ಕೊಮಂಲೆ 2010, ದಿನಾಂಕ : 01–07–2010.
2. ಸರ್ಕಾರದ ಆದೇಶ ಸಂಖ್ಯೆ : ವಇ 21 ಕೊಮಂಲೆ 2010, ದಿನಾಂಕ : 16–09–2010.
3. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ : ಕಕೊನಿಮ/ಲೆಪಶಾ/ಅನುದಾನ : 2010–2011, ದಿನಾಂಕ : 18–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ 2010–11 ನೇ ಸಾಲಿಗೆ ಮೊದಲನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು ` 638.55 ಲಕ್ಷಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲಾಗಿದೆ. ಕ್ರಮ ಸಂಖ್ಯೆ (2) ರಲ್ಲಿ 2010–11ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು `. 560.39 ಲಕ್ಷಗಳು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲಾಗಿದೆ. ಕ್ರಮ ಸಂಖ್ಯೆ (3)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರ ಪತ್ರದಲ್ಲಿ, 2010–2011ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) `. 159.33 ಲಕ್ಷಗಳು, ಕೊಳಚೆ ಸುಧಾರಣೆ – ಸಹಾಯಧನ – ಯೋಜನೆಯಡಿ `. 12.50 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿಗಾಗಿ `. 446.92 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 100.00 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ `. 446.92 ಲಕ್ಷಗಳು ಒಟ್ಟು `. 546.92 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 21 ಕೊಮಂಲೆ 2010, ಬೆಂಗಳೂರು, ದಿನಾಂಕ: 20–12–2010**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2010–11ನೇ ಸಾಲಿಗೆ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು `. 546.92 ಲಕ್ಷಗಳು (ಐದು ಕೋಟಿ ನಲವತ್ತಾರು ಲಕ್ಷದ ತೊಂಬತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

`. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಎರಡನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಸಿಬ್ಬಂದಿ ವೆಚ್ಚ 2217–04–191–2–01 | 87.50 | 71.83 | 159.33 |
| 2 | ಕೊಳಚೆಗಳ ಸುಧಾರಣೆ ಸಹಾಯಧನ 2217–04–191–2–02 | 12.50 | 0.00 | 12.50 |
| 3 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ 4217–60–800–3–01 | 0.00 | 375.09 | 375.09 |
| | **ಒಟ್ಟು** | **100.00** | **446.92** | **546.92** |

ಈ ಅನುದಾನವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ : ಎಫ್‌ಡಿ 795 ವೆಚ್ಚ–9/2010, ದಿನಾಂಕ : 10–12–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.134

**ಜಿ. ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ENERGY SECRETARIAT

Sub : Transfer of 57.75 MW wind power capacity in favour of M/s Tuppadahalli energy India Private Limited-reg.

Read : 1. Government Order No. DE 124 NCE 2002, Dated : 31-05-2002.
2. Government Order No. DE 124 NCE 2002, Dated : 05-03-2003.
3. Government Order No. EN 31 NCE 2004, Dated : 17-12-2004.
4. Government Order No. EN 369 NCE 2007, Dated : 15-10-2007.
5. Letter No.: KRED/08/TEIPL-CWPPL/2010/3369 dated : 12-11-2010/13-12-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1), (2), (3) and (4) above sanction has been accorded for implementation of 262.10 MW capacity Wind Power Project at Chitradurga, Davangere, Shimoga and Gadag Districts in favour of M/s Chitradurga Wind Power Private Limited.

In the letter read at (5) above, the Managing Director, Karnataka Renewable Energy Development Limited, Bangalore has recommended to the Government for transfer of the part capacity of 57.75 MW wind power capacity in favour of M/s Tuppadahalli Energy India Private Limited from out of the total sanctioned wind power capacity of 262.10 MW of M/s Chitradurga Wind Power Private Limited at Attighatta, Gondihosahalli, Gangaondanahalli, tuppadahalli, Malahalu, Pennasamudra, Devarahosahalli, Bettakadur villages of Shimoga District.

The proposal has been examined in detail and issued following Order :-

**Government Order No. EN 487 NCE 2010, Bangalore, Dated: 21-12- 2010**

Government accords approval for transfer of the part capacity of 57.75 MW wind power capacity in favour of M/s Tuppadahalli Energy India Private Limited from out of the total sanctioned wind power capacity of 262.10 MW of M/s Chitradurga Wind Power Private Limited at Attighatta, Gondihosahalli, Gangaondanahalli, Tuppadahalli, Malahalu, Pennasamudra, Devarahosahalli, Bettakadur villages of Shimoga District as detailed below and subject to the following conditions :-

| Sl. No. | Village Name | District | Land Survey No. | Extent of land (Ha) | Wind Turbine Generator location No. | Capacity in MW |
|---|---|---|---|---|---|---|
| 1. | Attighatta | Shimoga | 63 | 1.156 | T-1 | 1.65 (1x1650) |
| 2. | Gondihosahalli & Gangaondanahalli | | 34,35,36 | 31.665 | T-2, T-3, T-4, T-5, T-6, T-7, T-8, T-9, T-10, T-11, T-12, T-13, T-14 & T-15 | 23.1 (14x1650) |
| 3. | Tuppadahalli | | 105,106 | 11.151 | T-16, T-17, T-18, T-19, T-20, T-21, & T-24 | 11.55 (7x1650) |
| 4. | Malahalu | | 34 | 6,085 | T-22 & T-23 | 3.3 (2x1650) |
| 5. | Pennasamudra | | 53 | 12.543 | T-25, T-26, T-27, T-28, T-29, T-30 & T-32 | 11.55 (7x1650) |
| 6. | Devarahosahalli | | 40 | 1.725 | T-31 | 1.65 (3x1650) |
| 7. | Bettakadur | | 47 | 8.202 | T-33, T-34, & T-35 | 4.95 (3x1650) |
| | **Total** | | | **72.527** | | **57.75 (35x1650)** |

1. M/s Tuppadahalli Energy India Private Limited shall execute an agreement with Government within 45 (forty five) days from the date of issue of this Order.
2. PPA is assigned to MESCOM. MESCOM, shall execute the PPA with M/s Tuppadahalli Energy India Private Limited.
3. The Government reserves the right to cancel/modify this Order.

The other terms and conditions of the Government Order read at (1) above shall IPSO FACTO applicable.

PR. 135

By Order and in the name of the Governor of Karnataka,
**Suresh.B.Krishnappanavar,**
Under Secretary to Government
Energy Department

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆರ್.ಎಂ.ಸಿ. ಯಾರ್ಡ್ ಪೊಲೀಸ್ ಠಾಣೆ, ಯಶವಂತಪುರ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** : 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 41/ಡಿಇ1/ಆರ್6/2007, ದಿನಾಂಕ 11–11–2008.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)119/2008–09, ದಿನಾಂಕ 06–01–2010.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 05–05–10

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)119/2008–09, ದಿನಾಂಕ 06–08–2010.

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 151 ಸಿಎನ್ಎಸ್ 10, ದಿನಾಂಕ 08–12–2010.

**ಪ್ರಸ್ತಾವನೆ :**

ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆರ್.ಎಂ.ಸಿ. ಯಾರ್ಡ್ ಪೊಲೀಸ್ ಠಾಣೆ, ಯಶವಂತಪುರ, ಬೆಂಗಳೂರು ನಗರ, ಇವರು ಈ ಹಿಂದೆ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ

ತೀವ್ರ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ದಿನಾಂಕ 16–6–2006 ರಿಂದ ಠಾಣಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದು, ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸುವಲ್ಲಿ ಹಾಗೂ ಮೇಲಧಿಕಾರಿಯವರು ಕೊಟ್ಟ ಸೂಚನೆಗಳನ್ನು ಪಾಲಿಸುವಲ್ಲಿ ತೀವ್ರ ನಿರ್ಲಕ್ಷತೆ ಹಾಗೂ ತನ್ನ ಅಧೀನ ಸಿಬ್ಬಂದಿಗಳಿಂದ ಕೆಲಸ ಮಾಡಿಸಲು ವಿಫಲರಾಗಿರುತ್ತೀರಿ.

1. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಅದ ನೀವು ರಾತ್ರಿ ಗಸ್ತು ಕರ್ತವ್ಯದ ಸಿಬ್ಬಂದಿಗಳಿಗೆ ಸೂಕ್ತ ಆದೇಶಗಳನ್ನು ನೀಡದ ಕಾರಣ ಸಿಬ್ಬಂದಿಗಳೂ ರಾತ್ರಿ ಗಸ್ತು ಕಾರ್ಯವನ್ನು ನಿರ್ಲಕ್ಷಿಸಿದ್ದು, ಇದರಿಂದ ದಿನಾಂಕ 05–07–2006ಕ್ಕೆ ಮುಂಚೆ ಕಾಮಾಕ್ಷಿಪಾಳ್ಯ ಠಾಣೆಯ ವ್ಯಾಪ್ತಿಯಲ್ಲಿ ಮೊ.ಸಂ. 298:06 ಕಲಂ 457–380 ಭಾ.ದಂ.ಸಂ. ಪ್ರಕರಣದ ವರದಿಯಾಗಿರುತ್ತದೆ. ಈ ಬಗ್ಗೆ ನಿಮ್ಮ ಮೇಲಧಿಕಾರಿಗಳು ನೀಡಿದ ಸೂಚನೆಗಳನ್ನು ಪಾಲಿಸಿರುವುದಿಲ್ಲ ಹಾಗೂ ಪಾಲನಾ ವರದಿ ಸಲ್ಲಿಸಿರುವುದಿಲ್ಲ.
2. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಎ.ಸಿ.ಪಿ., ವಿಜಯನಗರ ಉಪ ವಿಭಾಗ ರವರು 2000ನೇ ಸಾಲಿನಿಂದ 2006ನೇ ಸಾಲಿನವರೆಗೆ ಕಾಮಾಕ್ಷಿಪಾಳ್ಯ ಠಾಣಾ ಸರಹದ್ದಿನಲ್ಲಿ ವರದಿಯಾದ ಪ್ರಕರಣಗಳಿಂದ 2000ರಲ್ಲಿನ 49 ಪ್ರಕರಣಗಳು, 2001ನೇ ಸಾಲಿನ 31 ಪ್ರಕರಣಗಳು, 2002ನೇ ಸಾಲಿನ 46 ಪ್ರಕರಣಗಳು, 2003ನೇ ಸಾಲಿನ 33 ಪ್ರಕರಣಗಳು, 2004ನೇ ಸಾಲಿನ 62 ಪ್ರಕರಣಗಳು, 2005ನೇ ಸಾಲಿನ 127 ಪ್ರಕರಣಗಳು, 2006ನೇ ಸಾಲಿನಲ್ಲಿ 125 ಪ್ರಕರಣಗಳೂ ತನಿಖೆಯಲ್ಲಿ ಮುಕ್ತಾಯವಾಗದೇ ಹಾಗೆಯೇ ಉಳಿದಿದ್ದು, ಈ ಬಗ್ಗೆ ಎ.ಸಿ.ಪಿ., ವಿಜಯನಗರ ಉಪ–ವಿಭಾಗರವರು ನಿಮಗೆ ಸಾಕಷ್ಟು ಜ್ಞಾಪನಗಳನ್ನು ನೀಡಿದ್ದರೂ ಸಹ ಪ್ರಕರಣಗಳ ತನಿಖೆ ಪೂರ್ಣಗೊಳಿಸದೆ, ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿದ್ದೀರಿ.
3. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನೀವು ಕಾಮಾಕ್ಷಿಪಾಳ್ಯ ಠಾಣೆಯ ಮೊ.ಸಂ. 425:04, 468:04 ಪ್ರಕರಣದಲ್ಲಿನ ಆರೋಪಿಯಾದ (ಎಂ.ಓ. ಅಪರಾಧಿ) ಸಂತೋಷಕುಮಾರ್ ಉರುಫ್ ಸಂತು ಈತನನ್ನು ದಿನಾಂಕ 30–7–2006ರಂದು ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಯಲ್ಲಿ ದಸ್ತಗಿರಿ ಮಾಡಿ ವಿಚಾರಣೆ ನಡೆಸಿ, ಕಲಂ 169 ಸಿಆರ್‌ಪಿಸಿ ಪ್ರಕಾರ ಬಿಡುಗಡೆ ಮಾಡಿದ್ದು, ಬಿಡುಗಡೆಗೆ ಮುನ್ನ ಸದರಿ ಆರೋಪಿಯ ವಿರುದ್ಧ ಬೆಂಗಳೂರು ನಗರದ ಯಾವುದಾದರೂ ಠಾಣೆಯಲ್ಲಿ ನ್ಯಾಯಾಲಯದಿಂದ ನೀಡಿರುವ ವಾರೆಂಟ್ ಇದೆಯೇ, ಸದರಿ ಆರೋಪಿ ಬೇರೆ ಠಾಣೆಗಳಿಗೆ ಅವಶ್ಯಕತೆ ಇದೆಯೇ ಇಲ್ಲವೆ ಎಂಬುದನ್ನು ಪರಿಶೀಲಿಸಿರುವುದಿಲ್ಲ ಹಾಗೂ ಈ ಎರಡೂ ಪ್ರಕರಣಗಳ ನ್ಯಾಯಾಲಯ ಪ್ರಗತಿಯ ವಿವರಗಳನ್ನು ಸಂಬಂಧಪಟ್ಟ ಕಡತಗಳಲ್ಲಿ ನಿರ್ವಹಿಸಿರುವುದಿಲ್ಲ, ತಾವು ಠಾಣಾಧಿಕಾರಿಯಾಗಿ ಇವುಗಳನ್ನು ಪರಿಶೀಲಿಸಿ ನ್ಯಾಯಾಲಯ ಕರ್ತವ್ಯದ ಸಿಬ್ಬಂದಿಗೆ ಸೂಕ್ತ ಆದೇಶ ನೀಡಲು ವಿಫಲರಾಗಿರುತ್ತೀರಿ ಹಾಗೂ ನಿಮ್ಮ ಮೇಲಧಿಕಾರಿಯಾದ ಎ.ಸಿ.ಪಿ. ವಿಜಯನಗರ ಉಪ ವಿಭಾಗ ರವರಿಗೆ ಸಮಜಾಯಿಷಿ ಸಲ್ಲಿಸದೆ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.
4. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಕಾಮಾಕ್ಷಿಪಾಳ್ಯ ಆದ ನಿಮಗೆ ದಿನಾಂಕ 14–9–2006 ರಂದು ಎಸಿಪಿ ವಿಜಯನಗರ ಉಪ ವಿಭಾಗ ರವರು ಕಾಮಾಕ್ಷಿಪಾಳ್ಯ ಠಾಣೆ ಸರಹದ್ದಿನ ಸುಂಕದಕಟ್ಟೆ, ಶ್ರೀಗಂಧದ ಕಾವಲು ವಸತಿ ರಹಿತ ಸಂಘದ ಅನ್ವಯ ವರದಿಯಾದ ಪ್ರಕರಣಗಳ ಬಗ್ಗೆ ಮಾಹಿತಿ, ವರದಿಯಾದ ಪ್ರಕರಣಗಳಲ್ಲಿ ಅಂತಿಮ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸುವ ಬಗ್ಗೆ ಆರೋಪಿಗಳ ದಸ್ತಗಿರಿ, ವಿವಾದದ ಸ್ಥಳದಲ್ಲಿ ಸೂಕ್ತ ಬಂದೋಬಸ್ತ್ ಮಾಡುವ ಬಗ್ಗೆ ಜ್ಞಾಪನಾ ನೀಡಿದ್ದು, ಈ ಬಗ್ಗೆ ಕ್ರಮಕೈಗೊಂಡು ಪಾಲನಾ ವರದಿ ಸಲ್ಲಿಸಬೇಕಾಗಿದ್ದರೂ ಸಹ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.
5. ಕಾಮಾಕ್ಷಿಪಾಳ್ಯ ಪೊಲೀಸು ಠಾಣೆಯ ಮೊ.ಸಂ. 213:99 ರಲ್ಲಿನ ಸಾಕ್ಷಿದಾರರಾದ ಸಾಕ್ಷಿ 1,3,4,5 ಮತ್ತು 6 ರವರನ್ನು ವಿಚಾರಣೆ ಬಗ್ಗೆ ದಿನಾಂಕ 10–10–06 ರಂದು ನ್ಯಾಯಾಲಯಕ್ಕೆ ಹಾಜರುಪಡಿಸಲು ಎಸಿಪಿ, ವಿಜಯನಗರ ಉಪ ವಿಭಾಗ ರವರು ನಿಮಗೆ ಜ್ಞಾಪನೆ ನೀಡಿದ್ದರೂ ಸಹ ನೀವು ಈ ಬಗ್ಗೆ ಕ್ರಮಕೈಗೊಂಡು ಪಾಲನಾ ವರದಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.
6. 2005ನೇ ಸಾಲಿನಲ್ಲಿ ಕಾಮಾಕ್ಷಿಪಾಳ್ಯ ಠಾಣೆಯ ವಾರ್ಷಿಕ ಪರಿವೀಕ್ಷಣೆ ಸಮಯದಲ್ಲಿ ತಿಳಿಸಿರುವಂತೆ 1994 ಮತ್ತು 1997ನೇ ಸಾಲಿನಿಂದ 2003ನೇ ಸಾಲಿನವರೆಗೆ ಬಾಕಿ ಉಳಿದಿರುವ 120 ಮೊಕದ್ದಮೆಗಳಲ್ಲಿ ತನಿಖೆ ಪೂರೈಸಿ, ನ್ಯಾಯಾಲಯಕ್ಕೆ ಅಂತಿಮ ವರದಿ ಸಲ್ಲಿಸುವಂತೆ ಎಸಿಪಿ, ವಿಜಯನಗರ ಉಪ ವಿಭಾಗ, ಬೆಂಗಳೂರು ರವರು ದಿನಾಂಕ 21–9–2006 ರಂದು ಜ್ಞಾಪನೆ ನೀಡಿ ಪಾಲನಾ ವರದಿ ಸಲ್ಲಿಸಲು ತಿಳಿಸಿದ್ದರೂ ಸಹ ಈ ಕಾರ್ಯಗಳನ್ನು ಮಾಡದೇ ಪಾಲನಾ ವರದಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.
7. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಕಾಮಾಕ್ಷಿಪಾಳ್ಯ ಠಾಣೆ ಆದ ನಿಮಗೆ ಮೊ.ಸಂ.: 528:06 ಕಲಂ 468, 420 ಭಾ.ದಂ.ಸಂ. ಪ್ರಕರಣದಲ್ಲಿ ತನಿಖೆ ಬಗ್ಗೆ ಎಸಿಪಿ ರವರು ಸೂಕ್ತ ಆದೇಶ ನೀಡಿ, ಜ್ಞಾಪನಾ ನೀಡಿ, ಕ್ರಮ ಕೈಗೊಂಡ ಬಗ್ಗೆ ಪಾಲನಾ ವರದಿ ಸಲ್ಲಿಸಲು ದಿನಾಂಕ 11–11–2006 ರಂದು ಸೂಚಿಸಿದ್ದರೂ ಸಹ ಎಸಿಪಿ, ರವರ ಆದೇಶವನ್ನು ಪಾಲಿಸದೇ ಪಾಲನಾ ವರದಿ ಸಲ್ಲಿಸಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.
8. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಕಾಮಾಕ್ಷಿಪಾಳ್ಯ ಠಾಣೆ ಆದ ನೀವು, ಕಾಮಾಕ್ಷಿಪಾಳ್ಯ ಠಾಣೆ ಮೊ.ಸಂ. 152:05 ಕಲಂ 468, 471, 420 ಜೊತೆಗೆ 34 ಭಾ.ದಂ.ಸಂ. ಪ್ರಕರಣದಲ್ಲಿ ಸಾಕಷ್ಟು ಸಾಕ್ಷಾಧಾರಗಳಿದ್ದು, ಆರೋಪಿಗಳ ವಿರುದ್ಧ ದೋಷಾರೋಪಣ ಪತ್ರ ಸಲ್ಲಿಸಲು ಹಾಗೂ ನೀವು ಕೈಗೊಂಡ ಕ್ರಮಗಳ ಬಗ್ಗೆ ಪಾಲನಾ ವರದಿ ಸಲ್ಲಿಸಲು ಎಸಿಪಿ ವಿಜಯನಗರ ಉಪ ವಿಭಾಗ ರವರು ದಿನಾಂಕ 13–10–2006 ರಂದು ಜ್ಞಾಪನಾ ಕಳಿಸಿದ್ದರೂ ಸಹ ನೀವು ಈ ಪ್ರಕರಣದಲ್ಲಿ ದೋಷಾರೋಪಣ ಪತ್ರ ಸಲ್ಲಿಸದೆ ನಿಮ್ಮ ಮೇಲಧಿಕಾರಿಯವರಿಗೆ ಪಾಲನಾ ವರದಿ ಸಲ್ಲಿಸದೆ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.
9. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ ಆದ ನಿಮಗೆ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ ಮೊ.ಸಂ. 284:06 ಕಲಂ 304(ಬಿ) ಭಾ.ದಂ.ಸಂ. ಪ್ರಕರಣದಲ್ಲಿ ಆರೋಪಿಗಳಾದ ಪುಟ್ಟನಿಂಗಮ್ಮ, ಜಯರಾಮಯ್ಯ, ಬೋರೇಗೌಡ ಗಂಗಾಧರ ರವರುಗಳನ್ನು ಪತ್ತೆ ಮಾಡಿ, ದಸ್ತಗಿರಿ ಮಾಡಲು ಎಸಿಪಿ, ವಿಜಯನಗರ ಉಪ ವಿಭಾಗ ರವರು ದಿನಾಂಕ 13–10–2006 ರಂದು ಜ್ಞಾಪನಾ ನೀಡಿ, ಈ

ಬಗ್ಗೆ ಕ್ರಮ ಕೈಗೊಂಡು ಪಾಲನಾ ವರದಿ ಸಲ್ಲಿಸಲು ಆದೇಶ ನೀಡಿದ್ದರೂ ಸಹ ಆರೋಪಿಗಳನ್ನು ದಸ್ತಗಿರಿ ಮಾಡದೆ ಪಾಲನಾ ವರದಿಯನ್ನು ಸಲ್ಲಿಸದೆ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

10. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆ ಮೊ.ಸಂ. 492:06 ಕಲಂ 307 ಭಾ.ದಂ.ಸಂ. ಜೊತೆಗೆ 34 ಭಾ.ದಂ.ಸಂ. ಪ್ರಕರಣದಲ್ಲಿ ಆರೋಪಿಗಳಾದ 1) ನಾಗರಾಜ, 2) ರಾಜೇಶ, 3) ಉಮೇಶ ಎಂಬುವರು ಆರೋಪಿಗಳಾಗಿದ್ದರೂ ಸಹ ದಸ್ತಗಿರಿ ಮಾಡದ ಬಗ್ಗೆ ದಿನಾಂಕ 28–10–2006 ರಂದು ಎಸಿಪಿ, ವಿಜಯನಗರ ಉಪ ವಿಭಾಗ ರವರು ನಿಮಗೆ ಜ್ಞಾಪನಾ ನೀಡಿ ಸಮಜಾಯಿಷಿ ಕೇಳಿದ್ದು, ನೀವು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

11. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಕಾಮಾಕ್ಷಿಪಾಳ್ಯ ಠಾಣೆಗೆ ಸಂಬಂಧಿಸಿದ ಪ್ರಕರಣಗಳ ಸಿ.ಸಿ. ಸಂಖ್ಯೆ: 11958:06, 17716:03, 12287:03, 9321:02, 9213;02, 6938:99, 6641:01, 19150:03, 7231:03 ಗಳಲ್ಲಿ ನ್ಯಾಯಾಲಯದಿಂದ ಸಮನ್ಸ್ ಮತ್ತು ವಾರೆಂಟ್‌ಗಳು ಜಾರಿಯಾಗದ ಬಗ್ಗೆ ಪರಿಶೀಲಿಸಿ, ಸಮಜಾಯಿಷಿ ಸಲ್ಲಿಸಲು ಎಸಿಪಿ, ವಿಜಯನಗರ ಉಪ ವಿಭಾಗ ರವರು ದಿನಾಂಕ 07–11–2006 ರಂದು ಜ್ಞಾಪನಾ ನೀಡಿದ್ದರೂ ಸಹ ಸಮಜಾಯಿಷಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

12. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಕಾಮಾಕ್ಷಿಪಾಳ್ಯ ಠಾಣೆಗೆ ಸಂಬಂಧಿಸಿದಂತೆ ದಿನಾಂಕ 31–10–2006ರ ವರೆಗೆ (ಹಿಂದಿನ ವರ್ಷಗಳು) ಸೇರಿದಂತೆ ವರ್ಷವಾರು ತನಿಖೆಯಲ್ಲಿರುವ ಪ್ರಕರಣಗಳ ಪಟ್ಟಿಯನ್ನು ನಮೂನೆ ಪ್ರಕಾರ ಕಳಿಸಿಕೊಡಲು ಎ.ಸಿ.ಪಿ. ವಿಜಯನಗರ ಉಪ ವಿಭಾಗ ರವರು ನಿಮಗೆ ದಿನಾಂಕ 26–11–2006, 8–12–2006 ಹಾಗೂ 18–12–2006 ದಿನಗಳಂದು ಜ್ಞಾಪನಗಳನ್ನು ನೀಡಿದ್ದರೂ ಸಹ ನೀವು ನಿಮ್ಮ ಮೇಲಧಿಕಾರಿಯವರಿಗೆ ಸರಿಯಾದ ಮಾಹಿತಿ ಒದಗಿಸದೇ ತಪ್ಪು ಮಾಹಿತಿ ನೀಡಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

13. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಕಾಮಾಕ್ಷಿಪಾಳ್ಯ ಠಾಣೆಯ ಮೊ.ಸಂ. 8:07 ಕಲಂ 498(ಎ)–342–324–506 (ಬಿ) ಜೊತೆಗೆ 34 ಭಾ.ದಂ.ಸಂ. ಪ್ರಕರಣದಲ್ಲಿ ಎಲ್ಲಾ ಆರೋಪಿಗಳನ್ನು ಕೂಡಲೇ ದಸ್ತಗಿರಿ ಮಾಡಿ ವರದಿ ಸಲ್ಲಿಸಲು ಎಸಿಪಿ ವಿಜಯನಗರ ಉಪ ವಿಭಾಗ ರವರು ದಿನಾಂಕ 06–01–2007 ರಂದು ಜ್ಞಾಪನ ನೀಡಿದ್ದರೂ ಸಹ ಈ ಬಗ್ಗೆ ಪಾಲನಾ ವರದಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

14. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನೀವು ಕಾಮಾಕ್ಷಿಪಾಳ್ಯ ಠಾಣೆಯ ವಾಸಿಗಳಾದ ದಿನೇಶ, ಡಿ. ಮನೋಹರ, ರವಿ, ಗಿರೀಶ ಮತ್ತು ಹರೀಶ ರವರುಗಳ ವಿರುದ್ಧ ರೌಡಿಪಟ್ಟಿ ತೆರೆಯಲು ದಿನಾಂಕ 28–7–2007 ರಂದು ವರದಿಯನ್ನು ತಯಾರಿಸಿ, ದಿನಾಂಕ 29–01–2007 ರಂದು 6 ತಿಂಗಳು ವಿಳಂಬವಾಗಿ ಎಸಿಪಿ, ವಿಜಯನಗರ ಉಪ ವಿಭಾಗ ರವರ ಕಛೇರಿಗೆ ಕಳಿಸಿರುತ್ತೀರಿ. ಈ ರೀತಿ ನೀವು ಉದ್ದೇಶಪೂರ್ವಕವಾಗಿ ರೌಡಿ ಪಟ್ಟಿ ತೆರೆಯಲು, ನಿಧಾನಿಸಿರುತ್ತೀರಿ ಹಾಗೂ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

15. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಕಾಮಾಕ್ಷಿಪಾಳ್ಯ ಠಾಣೆ ಆದ ನಿಮಗೆ ದಿನಾಂಕ 15–3–2007 ರಂದು ಎಸಿಪಿ, ವಿಜಯನಗರ, ಉಪವಿಭಾಗ ರವರು ಕಾಮಾಕ್ಷಿಪಾಳ್ಯ ಠಾಣೆಗೆ ಸಂಬಂಧಿಸಿದಂತೆ ಪ್ರತಿ ದಿನ ನ್ಯಾಯಾಲಯಕ್ಕೆ ಹಿಂದಿರುಗಿಸುವ ಸಮನ್ಸ್‌ಗಳು ವಾರೆಂಟ್‌ಗಳು, ನೋಟೀಸುಗಳು ಹಾಗೂ ಪ್ರೊಕ್ಲೇಮೇಷನ್, ಎಫ್ ಎಲ್. ಡಬ್ಲ್ಯುಗಳ ಜಾರಿ:ನಜಾರಿಗಳ ಬಗ್ಗೆ ಪ್ರತಿ ದಿನ ವರದಿ ಕಳಿಸಲು ಜ್ಞಾಪನ ನೀಡಿದ್ದರೂ ಸಹ ಈ ಬಗ್ಗೆ ಯಾವ ಕ್ರಮ ಕೈಗೊಳ್ಳದೇ ಹಾಗೂ ಎಸಿಪಿ ರವರಿಗೆ ಪಾಲನಾ ವರದಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

16. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಎಸಿಪಿ, ವಿಜಯನಗರ ಉಪ ವಿಭಾಗ ರವರು ದಿನಾಂಕ 12–5–2007 ರಂದು ಕಳಿಸಿರುವ ಜ್ಞಾಪನದ ಪ್ರಕಾರ, ಪೊಲೀಸು ಠಾಣೆಯಲ್ಲಿನ ಮೊಕದ್ದಮೆಗಳನ್ನು ತ್ವರಿತವಾಗಿ ತನಿಖೆ ನಡೆಸಿ ಅಂತಿಮ ವರದಿ ಸಲ್ಲಿಸಿ, ಪಾಲನಾ ವರದಿ ಸಲ್ಲಿಸಲು ಸೂಚಿಸಿದ್ದರೂ ಸಹ ನೀವು ಸದರಿ ಮೊಕದ್ದಮೆಗಳಲ್ಲಿ ತನಿಖೆಯನ್ನು ಪೂರೈಸದೇ ಎಸಿಪಿ, ರವರಿಗೆ ಪಾಲನಾ ವರದಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

17. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನಿಮಗೆ ಎಸಿಪಿ, ವಿಜಯನಗರ ಉಪ ವಿಭಾಗ, ರವರು ದಿನಾಂಕ 19–5–2007 ರಂದು ಕಳಿಸಿರುವ ಜ್ಞಾಪನದ ಪ್ರಕಾರ ಕಾಮಾಕ್ಷಿಪಾಳ್ಯ ಪೊಲೀಸು ಠಾಣೆಗೆ ಸಂಬಂಧಿಸಿದ ಕ್ರೈಂ ರಿಜಿಸ್ಟರ್‌ಗಳು, ಮುದ್ದೆಮಾಲ್ ರಿಜಿಸ್ಟರ್ ಇವುಗಳನ್ನು ಪರಿಶೀಲಿಸಿ ಸದರಿ ರಿಜಿಸ್ಟರ್‌ನಲ್ಲಿ ಸಿಡಿ ಭಾಗಗಳ ಬಗ್ಗೆ ನ್ಯಾಯಾಲಯದ ಪ್ರಗತಿ ಬಗ್ಗೆ ಹಾಗೂ ಕ್ವಾರ್ಟರ್‌ಲಿ ಕ್ರೈಂ ಅಬ್‌ಸ್ಟ್ರಾಕ್‌ಗಳಲ್ಲಿ ವ್ಯತ್ಯಾಸವುಳ್ಳ ಅಂಕಿ ಅಂಶಗಳ ಬಗ್ಗೆ ಪರಿಶೀಲಿಸಿ ನಂತರ ಪಾಲನಾ ವರದಿ ಸಲ್ಲಿಸಲು ಎಸಿಪಿ, ವಿಜಯನಗರ ಉಪವಿಭಾಗ ರವರು ತಿಳಿಸಿದ್ದರೂ ಸಹ ನೀವು ಈ ಕ್ರಮಗಳನ್ನು ಅನುಸರಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

18. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನೀವು ದಿನಾಂಕ 15–12–2006 ರಂದು ಶ್ರೀ ಸತೀಶ್ ಎಸ್. ಪಾಟೀಲ್, ಪಿ.ಎಸ್.ಐ., ರವರ ವಿರುದ್ಧ ಸಲ್ಲಿಸಿರುವ ವರದಿಯಲ್ಲಿ ಕಾಮಾಕ್ಷಿಪಾಳ್ಯ ಠಾಣೆ ಮೊ.ಸಂ. 448:02 ಕಲಂ 143–148–448–506 ಭಾ.ದಂ.ಸಂ. ಹಾಗೂ ಮೊ.ಸಂ. 466:03 ಪ್ರಕರಣದ ಮುಂದಿನ ತನಿಖೆಯ ಬಗ್ಗೆ ಆಗಿನ ಪಿ.ಐ., ಶ್ರೀ ಡಿ. ವಿ. ಶಿವಣ್ಣ ರವರಿಗೆ ಕಡತವನ್ನು ಕೊಟ್ಟಿದ್ದಾಗಿ ತಿಳಿಸಿದ್ದು ಇದರಿಂದ ಠಾಣಾಧಿಕಾರಿಯಾಗಿ ನೀವು ನಿಮ್ಮ ಠಾಣೆಯ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿಕೊಳ್ಳದೇ, ಸುಳ್ಳು ವರದಿ ಸಲ್ಲಿಸಿರುವ ಬಗ್ಗೆ ಎಸಿಪಿ, ವಿಜಯನಗರ ಉಪ–ವಿಭಾಗ, ಬೆಂಗಳೂರು ನಗರ ರವರು ದಿನಾಂಕ 28–5–2007 ರಂದು ಜ್ಞಾಪನ ನೀಡಿದ್ದರೂ ಸಹ ನೀವು ಸಮಜಾಯಿಷಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

19. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನೀವು ಕಾಮಾಕ್ಷಿಪಾಳ್ಯ ಠಾಣೆಗೆ ಸಿಪಿ ಕಛೇರಿಯಿಂದ ಕಳಿಸಿರುವಂತಹ ಅರ್ಜಿಗಳನ್ನು ದೂರು ಅರ್ಜಿ, ಎಸ್.ಬಿ.ವಿ.ಆರ್. ಇತ್ಯಾದಿ ಅರ್ಜಿಗಳನ್ನು ಕಾಲಾವಕಾಶ ನೀಡಿರುವ ಅವಧಿಯಲ್ಲಿ ವಿಚಾರಣೆ ಮಾಡಿಕೊಡಬೇಕಾಗಿದ್ದರೂ ಕೊಡದ ಕಾರಣ, ದಿನಾಂಕ 30–5–2007 ರಂದು ಎಸಿಪಿ ವಿಜಯನಗರ ಉಪ ವಿಭಾಗ, ಬೆಂಗಳೂರು ನಗರ ರವರು ನಿಮಗೆ ಜ್ಞಾಪನ ನೀಡಿ ಸಮಜಾಯಿಷಿ ಸಲ್ಲಿಸಲು ಆದೇಶಿಸಿದ್ದರೂ ಸಹ ಸಮಜಾಯಿಷಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

20. ಶ್ರೀ ಜಿ. ಸಿ. ಮಂಜುನಾಥ, ಪಿ.ಐ., ಆದ ನೀವು ಕಾಮಾಕ್ಷಿಪಾಳ್ಯ ಠಾಣೆ ಮೊ.ಸಂ. 205:07 ಕಲಂ 341–323–324–506(ಬಿ) ಭಾ.ದಂ.ಸಂ. ಪ್ರಕರಣದಲ್ಲಿ ಎಲ್ಲಾ ಆರೋಪಿಗಳ ದಸ್ತಗಿರಿ ಮಾಡಿ, ತನಿಖೆ ಪೂರೈಸಿ, ನ್ಯಾಯಾಲಯಕ್ಕೆ ದೋಷಾರೋಪಣ ಪತ್ರ ಸಲ್ಲಿಸಿ

ವರದಿ ಸಲ್ಲಿಸುವಂತೆ, ಎಸಿಪಿ, ವಿಜಯನಗರ ಉಪ ವಿಭಾಗ ರವರು ದಿನಾಂಕ 31-5-2007 ರಂದು ನಿಮಗೆ ಜ್ಞಾಪನ ನೀಡಿದ್ದರೂ ಸಹ ನೀವು ಈ ಬಗ್ಗೆ ಕ್ರಮ ಕೈಗೊಂಡು ಪಾಲನಾ ವರದಿ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಇವರ ವಿರುದ್ಧ ಆರೋಪಗಳಲ್ಲಿ ಆರೋಪ 6,14,18,19,20 ಈ ಐದು ಆರೋಪಗಳನ್ನು ಹೊರತುಪಡಿಸಿ ಉಳಿದ ಆರೋಪಗಳು ಸಾಬೀತಾಗಿವೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 11-11-2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಐದು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 06-01-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಲು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 76 ಪೊಸಿಅ 2010, ಬೆಂಗಳೂರು, ದಿನಾಂಕ: 23-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963 ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ. ಸಿ. ಮಂಜುನಾಥ, ಪಿ.ಐ. ಆರ್.ಎಂ.ಸಿ. ಯಾರ್ಡ್ ಪೊಲೀಸ್ ಠಾಣೆ, ಯಶವಂತಪುರ, ಬೆಂಗಳೂರು ನಗರ, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ 11-11-2008ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದೆ ಒಂದು ವರ್ಷ ಮುಂದೂಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 141

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಶ್ರೀ ಎ. ಡಿ. ವೀರಣ್ಣ, ನಿವೃತ್ತ ಕೇಂದ್ರ ಸ್ಥಾನಿಕ ಸಹಾಯಕರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರಿಗೆ ಆಡಳಿತ ಸಹಾಯಕರು ಮತ್ತು ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್‌ಎಫ್ 402, ವಿಇಟಿ 90 (1), ದಿನಾಂಕ 11-04-1991.
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್‌ಎಫ್ 402, ವಿಇಟಿ 90 (2), ದಿನಾಂಕ 11-04-1991.
3) ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಎಫ್ 224, ವಿಎಹೆಚ್ 93, ದಿನಾಂಕ 19-05-1995
4) ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್ 2, ವಿಎಹೆಚ್ 95, ದಿನಾಂಕ 28-12-1996
5) ಕಚೇರಿ ಆದೇಶ ಸಂಖ್ಯೆ: ಪಪಾನಿ/ಸಿಬ್ಬಂದಿ-1/62/ಕೆ.ಅಭ/90-91, ದಿನಾಂಕ 26-12-1996
6) ಶ್ರೀ ಎ. ಡಿ. ವೀರಣ್ಣ, ನಿವೃತ್ತ ಕೇಂದ್ರ ಸ್ಥಾನಿಕ ಸಹಾಯಕರು ಇವರ ಮನವಿಗಳು ದಿನಾಂಕ 22-01-1997, 02-03-1998, 31-07-2003 ಮತ್ತು 18-02-2010.
7) ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ-1/ವಿವ-41/2007-08, ದಿನಾಂಕ 08-06-2010.

**ಪ್ರಸ್ತಾವನೆ :**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಕಾಲಕಾಲಕ್ಕೆ ಹೊರಡಿಸಲಾದ ಪ್ರಥಮ ದರ್ಜೆ ಸಹಾಯಕರು, ಅಧೀಕ್ಷಕರು ಹಾಗೂ ಆಡಳಿತ ಸಹಾಯಕರ ಜ್ಯೇಷ್ಠತಾ ಪಟ್ಟಿಯಲ್ಲಿ ಶ್ರೀ ಎ. ಡಿ. ವೀರಣ್ಣ ಇವರು ಶ್ರೀ ಪಿ. ರಾಣಪ್ಪ ಮತ್ತು ಶ್ರೀ ಹೆಚ್. ಎಸ್. ಮಂಜುನಾಥ್ ಇವರುಗಳಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿರುತ್ತಾರೆ. ಶ್ರೀ ಎ. ಡಿ. ವೀರಣ್ಣನವರು ದಿನಾಂಕ 31-07-1998 ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುತ್ತಾರೆ. ಶ್ರೀ ಪಿ. ರಾಣಪ್ಪ ಇವರು ದಿನಾಂಕ 30-06-1999 ರಂದು ಮತ್ತು ಶ್ರೀ ಹೆಚ್. ಎಸ್. ಮಂಜುನಾಥ್ ಇವರು ದಿನಾಂಕ 30-07-2000 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುತ್ತಾರೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಶ್ರೀ ಹೆಚ್. ಎಸ್. ಮಂಜುನಾಥ್ (ಸ್ವತಂತ್ರ ಪ್ರಭಾರದ ಮೇಲೆ ಆಡಳಿತ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ) ಇವರಿಗೆ ದಿನಾಂಕ 30-05-1986 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಆಡಳಿತ ಸಹಾಯಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಲಾಗಿದೆ.

3. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಶ್ರೀ ಹೆಚ್. ಎಸ್. ಮಂಜುನಾಥ್, ಆಡಳಿತ ಸಹಾಯಕರು, ಇವರಿಗೆ ದಿನಾಂಕ 11-04-1991 ರಿಂದ ಜಾರಿಗೆ ಬರುವಂತೆ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಶ್ರೀ ಪಿ. ರಾಣಪ್ಪ, ಅಧೀಕ್ಷಕರು ಇವರಿಗೆ ದಿನಾಂಕ 30-05-1986 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಆಡಳಿತ ಸಹಾಯಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಲಾಗಿದೆ.

5. ಮೇಲೆ ಓದಲಾದ ಕ್ರಮಸಂಖ್ಯೆ (4)ರ ಆದೇಶದಲ್ಲಿ ಶ್ರೀ ಎ. ಡಿ. ವೀರಣ್ಣ (ಸ್ವತಂತ್ರ ಪ್ರಭಾರದ ಮೇಲೆ ಆಡಳಿತ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದು ಇವರಿಗೆ ದಿನಾಂಕ 28–12–1996 ರಿಂದ ಜಾರಿಗೆ ಬರುವಂತೆ ಆಡಳಿತ ಸಹಾಯಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಲಾಗಿದೆ.

6. ಮೇಲೆ ಓದಲಾದ ಕ್ರಮಸಂಖ್ಯೆ (5)ರ ಆದೇಶದಲ್ಲಿ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಶ್ರೀ ಎ. ಡಿ. ವೀರಣ್ಣ, ಆಡಳಿತ ಸಹಾಯಕರು ಇವರನ್ನು ಕೇಂದ್ರ ಕಛೇರಿ ಸಹಾಯಕರ ಹುದ್ದೆಗೆ ಅಧಿಕ ಪ್ರಭಾರಕರನ್ನಾಗಿ ನೇಮಕ ಮಾಡಿರುತ್ತಾರೆ.

7. ಮೇಲೆ ಕ್ರಮಸಂಖ್ಯೆ (6)ರನ್ವಯ ಓದಲಾದ ಮನವಿಗಳಲ್ಲಿ ಶ್ರೀ ಎ. ಡಿ. ವೀರಣ್ಣ, ನಿವೃತ್ತ ಕೇಂದ್ರ ಸ್ಥಾನಿಕ ಸಹಾಯಕರು ಇವರು ದಿನಾಂಕ 31–07–1998 ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ್ದು. ತಮಗೆ ದಿನಾಂಕ 27–05–1995 ರಂದು ಆಡಳಿತ ಸಹಾಯಕರ ಹುದ್ದೆಗೆ ಕೆ.ಸಿ.ಎಸ್.ಆರ್. ನಿಯಮ 32ರಡಿ ಸ್ವತಂತ್ರ ಪ್ರಭಾರದ ಮೇಲೆ ನೇಮಿಸಿದ್ದು ದಿನಾಂಕ 28–12–1996 ರಿಂದ ಅನ್ವಯಿಸುವಂತೆ ಆಡಳಿತ ಸಹಾಯಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಿರುವುದಾಗಿ ತದನಂತರ ಕೇಂದ್ರ ಕಚೇರಿ ಸಹಾಯಕರ ಹುದ್ದೆಗೆ ಅಧಿಕ ಪ್ರಭಾರಕರನ್ನಾಗಿ ನೇಮಕ ಮಾಡಿರುವುದಾಗಿ ತಿಳಿಸಿರುತ್ತಾರೆ. ಸೇವೆಯಲ್ಲಿ/ಜ್ಯೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ಶ್ರೀ ಹೆಚ್. ಎಸ್. ಮಂಜುನಾಥ ಇವರಿಗೆ ದಿನಾಂಕ 30–05–1986 ರಿಂದ ಅನ್ವಯಿಸುವಂತೆ ಆಡಳಿತ ಸಹಾಯಕರ ಹುದ್ದೆಗೆ ಮತ್ತು ದಿನಾಂಕ 11–04–1991 ರಿಂದ ಅನ್ವಯಿಸುವಂತೆ ಕೇಂದ್ರ ಸ್ಥಾನಿಕ ಸಹಾಯಕ ಹುದ್ದೆಗೆ ಮುಂಬಡ್ತಿ ನೀಡಿರುವುದಿಂದ ಮತ್ತು ಶ್ರೀ ಪಿ. ರಾಣಪ್ಪ ಇವರಿಗೆ ದಿನಾಂಕ 30–05–1986 ರಿಂದಲೇ ಜಾರಿಗೆ ಬರುವಂತೆ ಆಡಳಿತ ಸಹಾಯಕರ ಹುದ್ದೆಗೆ ಪದೋನ್ನತಿ ನೀಡಿರುವುದರಿಂದ ಅದರಂತೆ ತಮಗೂ ಸಹ ಆ ದಿನಾಂಕದಿಂದಲೇ ಆಡಳಿತ ಸಹಾಯಕರು ಹಾಗೂ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿಗಳನ್ನು ನೀಡಬೇಕೆಂದು ಕೋರಿರುತ್ತಾರೆ.

8. ಮೇಲೆ ಓದಲಾದ ಕ್ರಮಸಂಖ್ಯೆ (6)ರ ಪತ್ರದಲ್ಲಿ ಆಯುಕ್ತರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು 1980 ರಿಂದ 1994 ರವರೆಗೆ ಇಲಾಖೆಯಲ್ಲಿ ಆಡಳಿತ ಸಹಾಯಕರ ಹುದ್ದೆ ಒಂದೇ ಇದ್ದು, ಒಂದು ಹುದ್ದೆಗೆ ಮೀಸಲಾತಿ ಅನ್ವಯಿಸದೇ ಇರುವ ಕಾರಣ ಶ್ರೀ ಹೆಚ್. ಎಸ್. ಮಂಜುನಾಥ್ (ಪರಿಶಿಷ್ಟ ಜಾತಿ) ರವರಿಗೆ ಈ ಮೊದಲು ನೀಡಿದಂತೆ ದಿನಾಂಕ 30–05–1986 ರಿಂದ ಆಡಳಿತ ಸಹಾಯಕ ಹುದ್ದೆಗೆ ಮುಂಬಡ್ತಿ ನೀಡುವ ಸಂಬಂಧದಲ್ಲಿ ಜೇಷ್ಠತಾ ಪಟ್ಟಿಯನ್ನು ಪುನರಾವಲೋಕನ ಮಾಡಿದ ನಂತರ ಜೇಷ್ಠತೆಯನ್ವಯ ನಿಯಮಾನುಸಾರ ಸೇವೆಯಲ್ಲಿ ಹಿರಿಯ ನೌಕರರಾದ ಶ್ರೀ ಎ. ಡಿ. ವೀರಣ್ಣರವರಿಗೆ ಆಡಳಿತ ಸಹಾಯಕರ ಹುದ್ದೆಗೆ ಮುಂಬಡ್ತಿಯ ದಿನಾಂಕವನ್ನು ನಿಗದಿಪಡಿಸಲು ಪರಿಗಣಿಸಬಹುದೆಂದು ತಿಳಿಸಿರುತ್ತಾರೆ.

9. ಆಯುಕ್ತರ ಪ್ರಸ್ತಾವನೆ ಹಾಗೂ ಶ್ರೀ ಎಂ. ಡಿ. ವೀರಣ್ಣ, ನಿವೃತ್ತ ಕೇಂದ್ರ ಸಹಾಯಕರು ಇವರ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಕಾಲಕಾಲಕ್ಕೆ ಹೊರಡಿಸಲಾದ ಪ್ರಥಮ ದರ್ಜೆ ಸಹಾಯಕರು, ಅಧೀಕ್ಷಕರು, ಆಡಳಿತ ಸಹಾಯಕ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎ. ಡಿ. ವೀರಣ್ಣ ಇವರು ಶ್ರೀ ಪಿ. ರಾಣಪ್ಪ ಮತ್ತು ಶ್ರೀ ಹೆಚ್. ಎಸ್. ಮಂಜುನಾಥ್ ಇವರುಗಳಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿರುತ್ತಾರೆ. ಇಲಾಖೆಯಲ್ಲಿ ಆ ಸಂದರ್ಭದಲ್ಲಿ ಜಾರಿಯಲ್ಲಿದ್ದ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಕೇಂದ್ರ ಕಚೇರಿ ಸಹಾಯಕ ಮತ್ತು ಆಡಳಿತ ಸಹಾಯಕ ಹುದ್ದೆಗಳು ಮೀಸಲಾಗಿದ್ದವು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಸೇಹಿಮ 90, ದಿನಾಂಕ 16–11–1995ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿ ಒಂದೇ ಹುದ್ದೆ ಇರುವ ವೃಂದಗಳಲ್ಲಿ ನೇರ ನೇಮಕಾತಿಗಾಗಲೀ ಅಥವಾ ಮುಂಬಡ್ತಿಗಾಗಲೀ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳಿಗಾಗಿ ಭಾರತದ ಸಂವಿಧಾನದ ಅನುಚ್ಛೇದ 15ರಡಿಯಲ್ಲಿ ಹೊರಡಿಸಿದ ಮೀಸಲಾತಿ ಆದೇಶವು ಅನ್ವಯವಾಗುವುದಿಲ್ಲ. ಈ ಅಂಶವನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 27 ಸೇಹಿಮ 97, ದಿನಾಂಕ 07–09–1998ರಲ್ಲಿ ಸ್ಪಷ್ಟವಾಗಿ ಪುನರುಚ್ಚರಿಸಲಾಗಿದೆ. ಶ್ರೀ ಎ. ಡಿ. ವೀರಣ್ಣ ಇವರಿಗಿಂತ ಸೇವೆಯಲ್ಲಿ ಕಿರಿಯರಾಗಿದ್ದರೂ ಸಹ ಶ್ರೀ ಪಿ. ರಾಣಪ್ಪ ಮತ್ತು ಶ್ರೀ ಹೆಚ್. ಎಸ್. ಮಂಜುನಾಥ್ ಇವರುಗಳು ಆಡಳಿತ ಸಹಾಯಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ಪಡೆದಿರುತ್ತಾರೆ ಹಾಗೂ ಕೇಂದ್ರ ಸ್ಥಾನಿಕ ಸಹಾಯಕ ಹುದ್ದೆಗೆ ಪದೋನ್ನತಿ ಹೊಂದಿರುತ್ತಾರೆ. ಅದೇ ರೀತಿ ಸೇವೆಯಲ್ಲಿ/ಜ್ಯೇಷ್ಠತೆಯಲ್ಲಿ ಹಿರಿಯ ಅಧಿಕಾರಿಯಾದ ತಮಗೂ ಸಹ ಮುಂಬಡ್ತಿ ನೀಡುವಂತೆ ಶ್ರೀ ಎ. ಡಿ. ವೀರಣ್ಣರವರು ಕೋರಿದ್ದು, ಅದು ನಿಯಮಾನುಸಾರವಾಗಿದೆ ಮತ್ತು ನ್ಯಾಯ ಸಮ್ಮತವಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರ ಶ್ರೀ ಎ. ಡಿ. ವೀರಣ್ಣ, ನಿವೃತ್ತ ಕೇಂದ್ರ ಸ್ಥಾನಿಕ ಸಹಾಯಕರು ಇವರ ಮನವಿಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2(2)ರಡಿ ಹಾಗೂ ಕರ್ನಾಟಕ ನಾಗರೀಕ ಸೇವೆಗಳು (ಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು, 1973ರ ಸೆಕ್ಷನ್ 6ರಡಿ ಪರಿಗಣಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಪಸಂಮೀ 318 ಪಸಸೇ 2010, ಬೆಂಗಳೂರು, ದಿನಾಂಕ: 18–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎ. ಡಿ. ವೀರಣ್ಣ, ನಿವೃತ್ತ ಕೇಂದ್ರ ಸ್ಥಾನಿಕ ಸಹಾಯಕರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಇವರಿಗೆ ಕರ್ನಾಟಕ ನಾಗರೀಕ ಸೇವೆಗಳು (ಬಡ್ತಿ, ವೇತನ ಮತ್ತು ಪಿಂಚಣಿಗಳು ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2(2)ರನ್ವಯ ದಿನಾಂಕ 30–05–1986 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಆಡಳಿತ ಸಹಾಯಕರ ಹುದ್ದೆಗೆ (ವೇತನ ಶ್ರೇಣಿ ರೂ. 1,900–3,650) ಮತ್ತು ದಿನಾಂಕ 11–04–1991 ರಿಂದ ಪೂರ್ವಾನ್ವಯವಾಗಿ ಅನ್ವಯಿಸುವಂತೆ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಗೆ (ವೇತನ ಶ್ರೇಣಿ ರೂ. 2,200–4,070) ಸ್ಥಾನಪನ್ನ ಮುಂಬಡ್ತಿ ನೀಡಿ ಆದೇಶಿಸಿದೆ. ತತ್ಪರಿಣಾಮವಾಗಿ ಸದರಿ ನಿವೃತ್ತ ಅಧಿಕಾರಿಗೆ ಲಭ್ಯವಾಗುವ ಎಲ್ಲಾ ಆರ್ಥಿಕ ಸೌಲಭ್ಯಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮಬದ್ಧತೆ) ಅಧಿನಿಯಮ, 1973ರ ಸೆಕ್ಷನ್ 6ರನ್ವಯ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪಿ. ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

ಪಿ.ಆರ್. ನಂ. 142

(ಪಶುಸಂಗೋಪನೆ–ಎ)

## ಸಹಕಾರ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 46 ಸಿಎಲ್ಎಂ 2010, ದಿನಾಂಕ: 04-10-2010.
2. ನಬಾರ್ಡಿನ ಪತ್ರ ಸಂಖ್ಯೆ: ಎನ್.ಬಿ.ಕೆ.ಎ. ಐಡಿಡಿ/1540/ಎಸ್‌ಟಿ 82/2010-11, ದಿನಾಂಕ 04-01-2011.
3. ವ್ಯವಸ್ಥಾಪಕ ನಿರ್ದೇಶಕರು, ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ರಾಯಚೂರು ರವರ ಪತ್ರದ ಸಂಖ್ಯೆ: ಪ್ರ.ಕಾ/ಆ&ಪಿ/2010-11, ದಿನಾಂಕ: 30-12-2010.

**ಪ್ರಸ್ತಾವನೆ :**

ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು ಇದರ ಆಡಳಿತ ಸಮಿತಿಗೆ ದಿನಾಂಕ: 10-04-2010 ರೊಳಗೆ ನಡೆಸಬೇಕಾಗಿದ್ದ ಚುನಾವಣೆಯನ್ನು ದಿನಾಂಕ: 31-01-2011 ರವರೆಗೆ ವಿಸ್ತರಿಸಿ ಓದಲಾದ (1)ರ ಆದೇಶದಲ್ಲಿ ಅನುಮತಿ ನೀಡಲಾಗಿದೆ. ಈಗ ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವಿಭಜನೆಯ ಕುರಿತು ಪ್ರಸ್ತಾವೆಯನ್ನು ಅಂತಿಮವಾಗಿ ನಬಾರ್ಡು ಭಾರತೀಯ ರಿಸರ್ವ್ ಬ್ಯಾಂಕಿಗೆ ಸಲ್ಲಿಸಲಾಗಿದೆ. ಆದರೆ, ಇದರ ಬಗ್ಗೆ ನಿರ್ಣಯ / ಆದೇಶ ಹೊರಡಿಸಲು ಇನ್ನು ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆಂದು, ಈಗ ಚುನಾವಣೆ ಜರುಗಿಸಿದಲ್ಲಿ ಮತ್ತೆ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳಿಗೆ ಪ್ರತ್ಯೇಕವಾಗಿ ಕೇಂದ್ರ ಸಹಕಾರ ಬ್ಯಾಂಕುಗಳನ್ನು ಸ್ಥಾಪಿಸಲು ಅನುಮತಿ ದೊರೆತ ನಂತರ ಮತ್ತೆ ಚುನಾವಣೆ ಜರುಗಿಸಬೇಕಾಗುತ್ತದೆ. ಇದರಿಂದ ಅನಾವಶ್ಯಕವಾಗಿ ಚುನಾವಣೆ ಜರುಗಿಸುವ ಸಲುವಾಗಿ ವೆಚ್ಚವನ್ನು ಮಾಡಬೇಕಾಗುತ್ತದೆ. ಈ ಅನಾವಶ್ಯಕ ವೆಚ್ಚವನ್ನು ತಪ್ಪಿಸಲು, ಸಾರ್ವಜನಿಕ ಹಾಗೂ ಬ್ಯಾಂಕಿನ ದೃಷ್ಟಿಯಿಂದ ಚುನಾವಣೆಯನ್ನು ಮುಂದೂಡುವುದು ಅವಶ್ಯಕವಾಗಿರುತ್ತದೆಂದು ಸದರಿ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (3)ರ ಪತ್ರದಲ್ಲಿ ವರದಿ ಮಾಡುತ್ತಾ ದಿನಾಂಕ: 31-01-2011 ರಿಂದ ಕನಿಷ್ಠ ಮುಂದಿನ ಮೂರು ತಿಂಗಳವರೆಗೆ ವಿಸ್ತರಿಸಲು ಕೋರಿರುತ್ತಾರೆ.

ಈ ಕುರಿತು ನಬಾರ್ಡಿನೊಂದಿಗೆ ಸಮಾಲೋಚಿಸಲಾಗಿದೆ. ಹಾಗೂ ನಬಾರ್ಡು ಈ ಪ್ರಸ್ತಾವೆಗೆ ತನ್ನ ಸಹಮತಿಯನ್ನು ಉಲ್ಲೇಖ (2)ರ ಪತ್ರದಲ್ಲಿ ನೀಡಿರುತ್ತದೆ. ಆದುದರಿಂದ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 219 ಸಿಎಲ್ಎಂ 2010 ಬೆಂಗಳೂರು, ದಿನಾಂಕ : 7ನೇ ಜನವರಿ 2011**

ಮೇಲಿನ ಪರಿಸ್ಥಿತಿಯಲ್ಲಿ, ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ರಾಯಚೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಬ್ಯಾಂಕಿನ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ: 30-04-2011 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:**

ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30-04-2011ರ ವರೆಗೆ ಜಾರಿಯಲ್ಲಿತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ. ಆರ್. 219

## HORTICULTURE SECRETARIAT

**Sub:** "Scheme for Integrated Farming in Coconut for Productivity/Improvement with Coconut Development Board Assistance (100% CDB) 2401-00-108-2-35 (Plan)" State Level Administrative Approval for additional targets-reg.

**Read :**
1. G.O. No. ತೋಇ 67 ತೋಯೋಕಾ 2010 dated 09-04-2010.
2. G.O. No. HCD 51 HPP 2010 dated 10-06-2010.
3. Letter of CDB F. No. 597/2009 Dev(KA) dated 17-12-210.
4. Letter of Director of Horticulture No. ತೋಇ/ತೋಬೆ/ಸತೋಅ- 2/01/2010-11 dated 01-01-2011.

**Preamble :**

The "Scheme for Integrated Farming in Coconut for Productivity/Improvement with Coconut Development Board Assistance (100% CDB)" Head of Account 2401-00-108-2-35-100 (Financial Assistance/Relief) has been continued during 2010-11 as an ongoing scheme with an outlay of Rs. 700.00 lakhs as per Government Order read at (1) above. The scheme has to be implemented as per the guidelines issued by Coconut Development Board.

Accordingly, State Level Administrative Approval for implementing the Coconut Development Board programme during 2010-11 was accorded vide Government Order read at (2) above. Further, Coconut Development Board has approved an additional

area of 400 hectares at an expenditure of Rs. 70.00 lakhs for implementing integrated farming in Coconut holdings for Productivity Improvement Laying out demonstration plots vide its letter read at (3) above.

The Director of Horticulture in his letter read at (4) above has requested the Government to accord Administrative Approval for the said additionality.

The proposal of the Director of Horticulture has been examined and hence this order.

**GOVERNMENT ORDER NO. AHD 51 HPP 2010 BANGALORE, DATED 7$^{TH}$ JANUARY 2011.**

Government is pleased to accord State Level Administratifve Approval for implementing the Coconut Development Programmes during the year 2010-11 with an additional financial outlay of Rs. 70.00 lakhs as below:-

**Coconut Development Board Schemes – 2010-11**

(Rs. in lakhs)

| Sl. No. | Name of the Scheme | TARGET | | | |
|---|---|---|---|---|---|
| | | Phy. | Fin. | | |
| | | | State Share | CDB Share | Total |
| | **Programmes to be implemented by the State Department of Horticulture Integrated farming in Coconut holdings for Productivity Improvement Laying out demonstration plots.** | 400 ha | -- | 70.00 | 70.00 |

The Expenditure towards the programmes will be met under the "Scheme for Integrated Farming in Coconut for Productivity/Improvement with Coconut Development Board Assistance (100% CDB)" Head of Account **2401-00-108-2-35-100** (Financial Assistance/ Relief). Releases will be made as and when Coconut Development Board releases funds.

The Scheme will be implemented as per the guidelines issued vide Government Order read at (2) above.

This Order issues as per the delegation of powers vested with Secretaries vide Government Order No. PD 5 IMM 2010 dated 03-04-2010.

By Order and in the name of the Governor of Karnataka

**B.C. PRAKASH**

Under Secretary to Government

Horticulture Department.

P.R.220.

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಕೊಡಗು ವೃತ್ತದಲ್ಲಿನ ವಿವಿಧ ವಿಭಾಗಗಳಲ್ಲಿ ದೊರೆಯಬಹುದಾದ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಹಂಚಿಕೆ ಮಾಡುವ ಕುರಿತು.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಎ7/ ಡಿಬಿಎಂಬಿ/ಸಿಆರ್–28/10–11, ದಿನಾಂಕ: 18/19–10–2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 18/19–10–2010ರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರದಲ್ಲಿ ಕೊಡಗು ವೃತ್ತದ ವ್ಯಾಪ್ತಿಯ ವಿರಾಜಪೇಟೆ ಮತ್ತು ಮಡಿಕೇರಿ ವಿಭಾಗಗಳಲ್ಲಿ 2010–11ನೇ ಸಾಲಿಗೆ ಮಂಜೂರಾದ ಕಾರ್ಯಯೋಜನೆಯನ್ವಯ ಒಟ್ಟು 6,300 ಟನ್‌ಗಳ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳು ಲಭ್ಯವಿದ್ದು, ಅರಣ್ಯದಲ್ಲಿ ಬೆಂಕಿ ತಡೆಗಟ್ಟಲು ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಕೊಡಗು ವೃತ್ತದಲ್ಲಿ ದೊರೆಯಬಹುದಾದ ಹೂ ಬಿಟ್ಟ ಮತ್ತು ಒಣ ಬೊಂಬುಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಇವರಿಗೆ ಹಂಚಿಕೆ ಮಾಡಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯದಲ್ಲಿ ಬೆಂಕಿ ತಡೆಗಟ್ಟಲು ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಕೊಡಗು ವೃತ್ತದ ವ್ಯಾಪ್ತಿಯ ವಿರಾಜಪೇಟೆ ಮತ್ತು ಮಡಿಕೇರಿ ವಿಭಾಗಗಳಲ್ಲಿ ದೊರೆಯಬಹುದಾದ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ಇವರಿಗೆ ಪ್ರತಿ ಮೆಟ್ರಿಕ್ ಟನ್ 1ಕ್ಕೆ `.325/– ರಂತೆ ಹಾಗೂ ಪ್ರಚಲಿತ ತೆರಿಗೆಗಳೊಂದಿಗೆ ಹಣವನ್ನು ಪಡೆದುಕೊಂಡು ಹಂಚಿಕೆ ಮಾಡಲು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 223 ಎಫ್‌ಡಿಪಿ 2010, ಬೆಂಗಳೂರು, ದಿನಾಂಕ: 06–01–2011**

ಪ್ರಸ್ತಾವನೆಯನ್ನು ವಿವರಿಸಿರುವ ಕಾರಣಗಳ ಮೇರೆಗೆ ಅರಣ್ಯದಲ್ಲಿ ಬೆಂಕಿ ತಡೆಗಟ್ಟಲು ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಕೊಡಗು ವೃತ್ತದ ವ್ಯಾಪ್ತಿಯ ವಿರಾಜಪೇಟೆ ಮತ್ತು ಮಡಿಕೇರಿ ವಿಭಾಗಗಳಲ್ಲಿನ ಈ ಕೆಳಕಂಡ ವಲಯಗಳಲ್ಲಿ ದೊರೆಯಬಹುದಾದ ಹೂ ಬಿಟ್ಟ ಮತ್ತು ಒಣಗಿದ ಬೊಂಬುಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ಇವರಿಗೆ ಪ್ರತಿ ಮೆಟ್ರಿಕ್ ಟನ್ 1ಕ್ಕೆ `.325/–(ಮುನ್ನೂರ ಇಪ್ಪತ್ತೈದು ಮಾತ್ರ)ರಂತೆ ಹಾಗೂ ಪ್ರಚಲಿತ ತೆರಿಗೆಗಳೊಂದಿಗೆ ಹಣವನ್ನು ಪಡೆದುಕೊಂಡು ಹಂಚಿಕೆ ಮಾಡಲು ಸರ್ಕಾರವು ಆದೇಶಿಸಿದೆ.

| ವಿಭಾಗ | ವಲಯ | ಒಣ ಬೊಂಬುಗಳು (ಟನ್‌ಗಳಲ್ಲಿ) |
|---|---|---|
| **ವಿರಾಜಪೇಟೆ** | ತಿತಿಮತಿ | 5,000 |
| **ಮಡಿಕೇರಿ** | ಶನಿವಾರ ಸಂತೆ | 200 |
| | ಕುಶಾಲನಗರ | 500 |
| | ಸೋಮವಾರಪೇಟೆ | 600 |
| | **ಒಟ್ಟು** | **6,300** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್ 243

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ)ಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 11 ಎಸ್‌ಜಿಒ 2000, ದಿನಾಂಕ: 14.03.2000.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಅಸೇ 2000, ದಿನಾಂಕ: 29.07.2000.
3. ಸರ್ಕಾರದ ಆದೇಶ ಸಂಖ್ಯೆ: 07 ಸಸಿವಿ 2001, ದಿನಾಂಕ: 20.03.2001.
4. ಸರ್ಕಾರದ ಆದೇಶ ಸಂಖ್ಯೆ: 19 ಸಸಿವಿ 2002, ದಿನಾಂಕ: 06.01.2002.
5. ಸರ್ಕಾರದ ಆದೇಶ ಸಂಖ್ಯೆ: 244 ಸಅಸೇ 2001, ದಿನಾಂಕ: 23.04.2002.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಅಸೇ 2001, ದಿನಾಂಕ: 12.08.2002.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಅಸೇ 2001, ದಿನಾಂಕ: 31.10.2002.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಸಸಿವಿ 2007, ದಿನಾಂಕ: 15.01.2007.
9. ಕಡತ ಸಂಖ್ಯೆ: ಸಿಆಸುಇ 267 ಲೆಪ (ಐಆರ್‌ಎಲ್‌ಎ)2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 14.03.2000ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು, ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು, ಹಾಗೂ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ, ಭತ್ಯೆ ಹಾಗೂ ಇತರೆ ಕ್ಲೇಮ್‌ಗಳ ಪರಿಶೀಲಿಸಿ ಪಾವತಿ ಸಲುವಾಗಿ ಈ ಕೆಳಕಂಡ ಅಧಿಕಾರಿ / ಸಿಬ್ಬಂದಿಗಳನ್ನು ಒಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸಧಾರಣೆ ಇಲಾಖೆ(ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2. | ಶಾಖಾಧಿಕಾರಿ | 01 |
| 3. | ಅಕೌಂಟ್ಸ್ ಅಸಿಸ್ಟೆಂಟ್ | 01 |
| 4. | ಸಹಾಯಕರು | 02 |
| 5. | ಕಿರಿಯ ಸಹಾಯಕ | 01 |
| 6. | ಶೀಘ್ರಲಿಪಿಗಾರ | 01 |
| 7. | ಕ್ಯಾಷಿಯರ್ | 01 |
| 8. | ತಾಂತ್ರಿಕ ಸಹಾಯಕರು (ವೇತನ ಶ್ರೇಣಿ ರಹಿತ ಹುದ್ದೆ) | 01 |
| 9. | ದಲಾಯತ್ | 01 |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 29.07.2000ರ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್‌ಗಳ ಹುದ್ದೆಯನ್ನು ಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ. ಹಾಗೂ ಎರಡು ಸಹಾಯಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 23.04.2002ರ ಆದೇಶದಲ್ಲಿ ಸಿ.ಆ.ಸು.ಇಲಾಖೆ (ಲೆಕ್ಕಪತ್ರ–ಐಆರ್ ಎಲ್‌ಎ) ಶಾಖೆಗೆ ಹೆಚ್ಚುವರಿಯಾಗಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| ಅ. | ಡಾಟ ಎಂಟ್ರಿ ಆಪರೇಟರ್ | 01 ಹುದ್ದೆ |
| ಆ. | ಸಹಾಯಕ | 01 ಹುದ್ದೆ |
| ಇ. | ಬೆರಳಚ್ಚುಗಾರ | 01 ಹುದ್ದೆ |

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 12.08.2002ರ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ: 30.10.2002ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯೆಂದು ಮರು ಪದನಾಮೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಿ.ಅ.ಸು.ಇಲಾಖೆ, ಲೆಕ್ಕಪತ್ರ–ಐಆರ್‌ಎಲ್‌ಎ ಶಾಖೆಯಲ್ಲಿನ ಹುದ್ದೆಗಳನ್ನು ದಿನಾಂಕ: 14.03.2007 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಕಡತದಲ್ಲಿ ಹೆಚ್.ಆರ್.ಎಂ.ಎಸ್. ಪದ್ಧತಿಯ ಅಳವಡಿಕೆಯಿಂದ ಕೆಲಸ ಮತ್ತು ಮಾನವ ಶಕ್ತಿಯಲ್ಲಿ ಬದಲಾವಣೆಯಿರುವುದಿಲ್ಲವಾದ್ದರಿಂದ ಯಾವುದೇ ಹುದ್ದೆಗಳನ್ನು ಕಡಿಮೆ ಮಾಡಲು ಸಾಧ್ಯವಿಲ್ಲವಾದ್ದರಿಂದ ಸಿ.ಆ.ಸು.ಇಲಾಖೆ, ಲೆಕ್ಕಪತ್ರ–ಐಆರ್‌ಎಲ್‌ಎ ಶಾಖೆಯ ಹುದ್ದೆಗಳನ್ನು ದಿನಾಂಕ: 14.03.2007ರಿಂದ ಖಾಯಂ ಹುದ್ದೆಗಳನ್ನಾಗಿ ಮಾರ್ಪಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 606 ಸಅಸೇ 2010 ಬೆಂಗಳೂರು, ದಿನಾಂಕ: 12–01–2011.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 13.03.2008ರಿಂದ 14.03.2012ರವರೆಗಿನ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 2. | ಶಾಖಾಧಿಕಾರಿ | 01 |
| 3. | ತಾಂತ್ರಿಕ ಸಹಾಯಕರು/ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 01 |
| 4. | ಹಿರಿಯ ಸಹಾಯಕ | 01 |
| 5. | ಸಹಾಯಕರು | 03 |
| 6. | ಕಿರಿಯ ಸಹಾಯಕ | 01 |
| 7. | ಶೀಘ್ರ ಲಿಪಿಗಾರ | 01 |
| 8. | ಕ್ಯಾಷಿಯರ್ | 01 |
| 9. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 01 |
| 10. | ಡಾಟಾ ಎಂಟ್ರಿ ಆಪರೇಟರ್ | 01 |
| 11. | ಬೆರಳಚ್ಚುಗಾರರು | 01 |
| 12. | ದಲಾಯತ್ (ದಲಾಯತ್–1+ ಆಫೀಸ್ ಆರ್ಡರ್ಲಿ–1) | 02 |
| | **ಒಟ್ಟು** | 15 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ. ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–3).

ಪಿ.ಆರ್ 244

## ಅರಣ್ಯ ಪರಿಸರ ಮತ್ತು ಜೀವಶಾಸ್ತ್ರ ಸಚಿವಾಲಯ

**ವಿಷಯ** : ಮೆ: ಭಾರತ್ ರಯಾನ್ ಹರವು (Bharath Rayan Haravu) ಗಣಿ ಗುತ್ತಿಗೆ ಸಂಖ್ಯೆ: 2010ರ ಪ್ರದೇಶದ ಮೋಜಣಿಗೆ ಸಂಬಂಧಿಸಿದಂತೆ ತನಿಖೆ ನಡೆಸುವ ಬಗ್ಗೆ.

**ಓದಲಾಗಿದೆ** :
1) ರಾಮಘಡ್ ಮಿನರಲ್ಸ್ ಅಂಡ್ ಮೈನಿಂಗ್ ಲಿಮಿಟೆಡ್ ರವರ ಪತ್ರ ಸಂಖ್ಯೆ: RMML/BRH/631 ದಿನಾಂಕ: 4–8–2010.
2) ಸರ್ಕಾರದ ಪತ್ರ ಸಂಖ್ಯೆ: ಅಪಜೀ 148 ಎಫ್ ಎಫ್ ಎಂ 2010 ದಿನಾಂಕ: 21–8–2010.
3) ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(EWPRT) ರವರ ಪತ್ರ ಸಂಖ್ಯೆ: APCCF (EWPRT)/BRH-ML/2010–11 ದಿನಾಂಕ: 28–9–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 4–8–2010ರ ತಮ್ಮ ಮನವಿಯಲ್ಲಿ ಮೆ: ರಾಮಘಡ್ ಮಿನರಲ್ಸ್ ಅಂಡ್ ಮೈನಿಂಗ್ ಲಿಮಿಟೆಡ್ ರವರು ಮಾನ್ಯ ಸರ್ವೋಚ್ಚ ನ್ಯಾಯಾಲಯವು ವಿಶೇಷ ರಜಾ ಅರ್ಜಿ ಸಂಖ್ಯೆ: 11508/2006ರ ಪ್ರಕರಣದಲ್ಲಿ ನೀಡಿರುವ ಆದೇಶದಂತೆ ML NO. 2010ರ

ಮೆ: ಭಾರತ್ ರಯಾನ್ ಹರವು ಮತ್ತು ಮೆ: ಮುನೀರ್ ಎಂಟರ್‌ಪ್ರೈಸಸ್, ಮೆ: ಟ್ರೈಡೆಂಟ್ ಮಿನರಲ್ಸ್, ಮೆ: ಎಸ್.ಬಿ. ಮಿನರಲ್ಸ್ ಹಾಗೂ ಮೆ: ವೀಯಂ ಪ್ರೈವೇಟ್ ಲಿಮಿಟೆಡ್ ರವರ ಗಣಿ ಗುತ್ತಿಗೆ ಪ್ರದೇಶಗಳನ್ನು ಮೋಜಣಿ ಮಾಡುವಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಗೆ ನಿರ್ದೇಶನ ನೀಡಲಾಗಿತ್ತೆಂದು, ಆದರೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯು ಮೋಜಣಿ ಮಾಡದೇ ವಲಯ ಅರಣ್ಯ ಅಧಿಕಾರಿಯವರು ಮೋಜಣಿ ಕಾರ್ಯ ಕೈಗೊಂಡಿದ್ದು, ಸದರಿಯವರು ಮೋಜಣಿ ಮಾಡುತ್ತಿರುವ ಪದ್ಧತಿಯು ಸರಿಯಾಗಿರುವುದಿಲ್ಲವೆಂದು ತಿಳಿಸಿ ಈ ಮೋಜಣಿಯನ್ನು ಕೂಡಲೇ ನಿಲ್ಲಿಸಿ ಬೆಂಗಳೂರಿನಿಂದ ಮೋಜಣಿದಾರರನ್ನು ನೇಮಿಸಿ ಮೋಜಣಿಯನ್ನು ಮಾಡಲು ಕೋರಿದ್ದರು.

ಮೇಲೆ ಓದಲಾದ (2)ರ ದಿನಾಂಕ: 21–8–2010ರ ಸರ್ಕಾರಿ ಪತ್ರದಲ್ಲಿ ಮೆ: ರಾಮಘಢ್ ಮಿನರಲ್ಸ್ ಅಂಡ್ ಮೈನಿಂಗ್ ಲಿಮಿಟೆಡ್ ರವರ ದಿನಾಂಕ: 4–8–2010ರ ಮನವಿಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಕಳುಹಿಸಿ ವಿವರವಾದ ವರದಿಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ (3)ರ ದಿನಾಂಕ: 28–9–2010ರ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (EWPRT) ರವರು ಮೆ: ಭಾರತ್ ರಯಾನ್ ಹರವು ಗಣಿ ಗುತ್ತಿಗೆ ಸಂಖ್ಯೆ: 2010ರ ಪ್ರದೇಶದ ಸುತ್ತ ಈ ಕೆಳಕಂಡ ಗಣಿಗುತ್ತಿಗೆದಾರರು ಒಂದೇ ಗಡಿರೇಖೆಯಲ್ಲಿರುತ್ತದೆಂದು ತಿಳಿಸಿರುತ್ತಾರೆ.

1) ಮೆ: ವೀಯಂ ಪ್ರೈವೇಟ್ ಲಿಮಿಟೆಡ್ (MLNo.988)
2) ಮೆ: ಬ್ರಹ್ಮಾನಂದ (MLNo.1626)
3) ಮೆ: ಟ್ರೈಡೆಂಟ್ ಮಿನರಲ್ಸ್ (MLNo.2315 ಮತ್ತು ML No.1732)
4) ಮೆ: ಮಿನರಲ್ಸ್ ಸಿಂಡಿಕೇಟ್ (MLNo.2320)
5) ಮೆ: ಮುನೀರ್ ಎಂಟರ್‌ಪ್ರೈಸಸ್ (MLNo.2339)
6) ಮೆ: ಬಾಲಾಜಿ ಮೈನ್ಸ್ ಅಂಡ್ ಮಿನರಲ್ಸ್ (MLNo.2564)
7) ಮೆ: ಎಸ್.ಬಿ. ಮಿನರಲ್ಸ್ (MLNo.2550)
8) ಮೆ: ಲಕ್ಷ್ಮೀನಾರಾಯಣ ಮೈನಿಂಗ್ (MLNo.2487)

ಮೆ: ಮುನೀರ್ ಎಂಟರ್‌ಪ್ರೈಸಸ್ ರವರ ಗಣಿ ಗುತ್ತಿಗೆ ಸಂಖ್ಯೆ: 2339 ಸಹ ಪರಿಶೀಲಿಸಿದ್ದು, ಸದರಿ ಪ್ರದೇಶದ ನಕಾಶೆ ಸ್ಪಷ್ಟವಾಗಿ ಇಲ್ಲದಿರುವುದರಿಂದ ಈ ಬಗ್ಗೆ ಸರಿಯಾದ ಮೋಜಣಿ ಮಾಡಬೇಕೆಂದು ತಮ್ಮ ಆಕ್ಷೇಪಣೆಯನ್ನು ವ್ಯಕ್ತಪಡಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರು 2006–07ನೇ ಸಾಲಿನಲ್ಲಿ ಮೋಜಣಿ ಮಾಡಿ ಗುರ್ತಿಸಿರುವ ಗಡಿರೇಖೆಗಳು ಮತ್ತು ಅರಣ್ಯ ಇಲಾಖೆ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಮತ್ತು ಕಂದಾಯ ಇಲಾಖೆಗಳ ಸಹಯೋಗದಿಂದ ಜಂಟಿ ಮೋಜಣಿ ಮಾಡಿ ಗುರ್ತಿಸಿದ ಗಡಿ ರೇಖೆಗಳು ಬೇರೆ ಬೇರೆಯಾಗಿ ವ್ಯತ್ಯಾಸವಿರುವುದರಿಂದ ಮೆ: ಭಾರತ್ ರಯಾನ್ ಹರವು ಗಣಿ ಗುತ್ತಿಗೆ ಸಂಖ್ಯೆ: 2010ರ ಪ್ರದೇಶದಲ್ಲಿ ಅಕ್ರಮವಾಗಿ ಒತ್ತುವರಿ ಮಾಡಿಕೊಂಡು ಗಣಿಗಾರಿಕೆ ನಡೆಸುತ್ತಿರುವ ಮೆ: ಟ್ರೈಡೆಂಟ್ ಮಿನರಲ್ಸ್, ಮೆ: ಎಸ್.ಬಿ. ಮಿನರಲ್ಸ್ ಹಾಗೂ ಮೆ: ವೀಯಂ ಪ್ರೈವೇಟ್ ಲಿಮಿಟೆಡ್ ರವರುಗಳ ಗಡಿರೇಖೆಯನ್ನು ತನಿಖೆ ಮೂಲಕ ಸತ್ಯಾ ಸತ್ಯತೆಯನ್ನು ಅರಿಯಲು ಈ ಪ್ರಕರಣವನ್ನು ಮಾನ್ಯ ಲೋಕಾಯುಕ್ತ ವಿಚಾರಣೆಗೆ ವಹಿಸಲು ಕೋರಿರುತ್ತಾರೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 148 ಎಫ್‌ಎಫ್‌ಎಂ 2010, ಬೆಂಗಳೂರು, ದಿನಾಂಕ: 11–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 7 (2)ಎ ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೆ: ಭಾರತ್ ರಯಾನ್ ಹರವು (Bharat Rayan Haravu)ಗಣಿ ಗುತ್ತಿಗೆ ಸಂಖ್ಯೆ: 2010ರ ಪ್ರದೇಶದಲ್ಲಿ ಅಕ್ರಮವಾಗಿ ಒತ್ತುವರಿ ಮಾಡಿಕೊಂಡು ಗಣಿಗಾರಿಕೆ ನಡೆಸುತ್ತಿರುವ ಮೆ: ಟ್ರೈಡೆಂಟ್ ಮಿನರಲ್ಸ್, ಮೆ: ಎಸ್.ಬಿ. ಮಿನರಲ್ಸ್ ಹಾಗೂ ಮೆ: ವೀಯಂ ಪ್ರೈವೇಟ್ ಲಿಮಿಟೆಡ್ ರವರುಗಳ ಗಡಿರೇಖೆಯನ್ನು ತನಿಖೆಗಾಗಿ ಈ ಪ್ರಕರಣವನ್ನು ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 245

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಹಾಗೂ ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2010–11ನೇ ಸಾಲಿಗೆ ನಿಗದಿ ಪಡಿಸಿರುವ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 137 ಕೆಎಂಯು 2010, ದಿನಾಂಕ 05.08.2010
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ: ಎಸಿಟಿ: 1:18:2010–11,ದಿನಾಂಕ 12.11.2010.

**ಪ್ರಸ್ತಾವನೆ:**

2010–11ನೇ ಸಾಲಿಗೆ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ನಿಗದಿ ಪಡಿಸಲಾದ ಅನುದಾನ ರೂ. 25.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ. 12.50 ಲಕ್ಷಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 05.08.2010ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ. ನಿಗದಿ ಪಡಿಸಲಾದ ಅನುದಾನ ರೂ.25.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ಬಿಡುಗಡೆಗೊಳಿಸಿರುವ ರೂ. 12.50 ಲಕ್ಷಗಳಿಗೆ

ಈಗಾಗಲೇ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಲಾಗಿದ್ದು, 2ನೇ ಕಂತಿನ ಅನುದಾನ ರೂ.12.50 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205–00–103–0–18 (ಯೋಜನೆ) 101 ಸಹಾಯಾನುದಾನದಡಿಯಲ್ಲಿ ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ 12.11.2010ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕೆಎಂಯು 2010, ಬೆಂಗಳೂರು, ದಿನಾಂಕ: 03.01.2011.**

ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿಗೆ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ನಿಗದಿ ಪಡಿಸಲಾದ ಅನುದಾನ ರೂ. 25.00 ಲಕ್ಷಗಳಲ್ಲಿ ಎರಡನೇ ಕಂತಾಗಿ ರೂ. 12.50 (ರೂ. ಹನ್ನೆರಡು ಲಕ್ಷ ಐವತ್ತು ಸಾವಿರಗಳು ಮಾತ್ರ) ಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–18 (ಯೋಜನೆ) 101 ಸಹಾಯಾನುದಾನ ಅಡಿಯಲ್ಲಿ ಭರಿಸತಕ್ಕದ್ದು ಹಾಗೂ ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 28.12.2010ರ ಟಿಪ್ಪಣಿ ಸಂಖ್ಯೆ ಶಿಇ 2203 ಐಎಫ್ (ಬಿ&ಎ) 2010ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್ 246

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಹಾಗೂ ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ರಚಿಸಲಾದ ತಜ್ಞರ ಸಮಿತಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 26 ಕೆಎಂಯು 2009, ದಿನಾಂಕ 15–12–2009
2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಆಪ್ರಾ ಸಂಪ / ಬೀ.ತ.ಸ./ 2010–11/471, ದಿನಾಂಕ 01.12.2010.

**ಪ್ರಸ್ತಾವನೆ:**

ದಿನಾಂಕ 15.12. 2009ರ ಸರ್ಕಾರದ ಆದೇಶದಲ್ಲಿ ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ 14 ಸದಸ್ಯರನ್ನೊಳಗೊಂಡ ತಜ್ಞರ ಸಮಿತಿಯನ್ನು ದಿನಾಂಕ 9.12.2008ರಿಂದ ಎರಡು ವರ್ಷಗಳ ಅವಧಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರೆಸಿದೆ.

ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯ ಅವಧಿಯು ದಿನಾಂಕ: 08.12.2010ಕ್ಕೆ ಮುಕ್ತಾಯಗೊಳ್ಳಲಿದ್ದು, ದಿನಾಂಕ: 08.12.2010ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಪ್ರಸ್ತುತ ಇರುವ ಸದಸ್ಯರನ್ನೊಳಗೊಂಡು ಮುಂದುವರೆಸುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 229 ಕೆಎಂಯು 2010 ಬೆಂಗಳೂರು, ದಿನಾಂಕ: 11.01.2011.**

ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ರಚಿಸಿರುವ ತಜ್ಞರ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 26 ಕೆಎಂಯು 2009ರಲ್ಲಿ ದಿನಾಂಕ 9.12.2008ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದ್ದನ್ನು ದಿನಾಂಕ 09.12.2010ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಪ್ರಸ್ತುತ ಇರುವ ಸದಸ್ಯರನ್ನೊಳಗೊಂಡು ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್ 247

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಹಾಗೂ ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ರಚಿಸಲಾದ ತಜ್ಞರ ಸಮಿತಿಯ ಕಾಲಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 20 ಕೆಎಂಯು 2009, ದಿನಾಂಕ 07-09-2009

2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಆಪ್ರಾಸಂಪ/ಕಿ.ತ.ಸ./ 2010-11/472, ದಿನಾಂಕ 01.12.2010.

**ಪ್ರಸ್ತಾವನೆ:**

ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ 14 ಸದಸ್ಯರನ್ನೊಳಗೊಂಡ ತಜ್ಞರ ಸಮಿತಿಯನ್ನು ದಿನಾಂಕ 9.12.2008ರಿಂದ ಎರಡು ವರ್ಷಗಳ ಅವಧಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರೆಸಿದೆ.

ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯ ಅವಧಿಯು ದಿನಾಂಕ: 08.12.2010ಕ್ಕೆ ಮುಕ್ತಾಯಗೊಳ್ಳಲಿದ್ದು ಸದರಿ ಸಮಿತಿಯನ್ನು ದಿನಾಂಕ: 08.12.2010ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಪ್ರಸ್ತುತ ಇರುವ ಸದಸ್ಯರನ್ನೊಳಗೊಂಡು ಮುಂದುವರೆಸುವಂತೆ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 232 ಕೆಎಂಯು 2010 ಬೆಂಗಳೂರು, ದಿನಾಂಕ: 11.01.2011.**

ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ರಚಿಸಿರುವ ತಜ್ಞರ ಸಮಿತಿಯನ್ನು ದಿನಾಂಕ 9.12.2010ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಪ್ರಸ್ತುತ ಇರುವ ಸದಸ್ಯರನ್ನೊಳಗೊಂಡು ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ

ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್ 248

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿನ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 830 ಸಅಸೇ 2008, ದಿನಾಂಕ: 07.11.2008

2. ಕನ್ನಡ, ಸಂಸ್ಕೃತಿ ಮತ್ತು ವಾರ್ತಾ, ಪ್ರವಾಸೋದ್ಯಮ ಇಲಾಖೆಯ ಅ.ಟಿ.ಸಂಖ್ಯೆ: ಕಸಂವಾಪ್ರ 247 ಸ್ವೀಮರ 2010 ದಿನಾಂಕ: 03.12.2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಆಪ್ತ ಶಾಖೆಯಲ್ಲಿನ 07 ಪೂರಕ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 13.10.2008 ರಿಂದ ಒಂದು ವರ್ಷದ ಅವಧಿಗೆ ಸೃಜಿಸಿ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಆಪ್ತ ಶಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 14.10.2009ರಿಂದ ಎರಡು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಲಾಗಿದೆ.

| **ಕ್ರ.ಸಂ.** | **ಹುದ್ದೆಯ ಪದನಾಮ** | **ಹುದ್ದೆಗಳ ಸಂಖ್ಯೆ** |
|---|---|---|
| 1. | ಆಪ್ತ ಕಾರ್ಯದರ್ಶಿ (ಗ್ರೇಡ್-2) | 01 |
| 2. | ಆಪ್ತ ಸಹಾಯಕರು (ಶೀಘ್ರಲಿಪಿಗಾರರು) | 02 |
| 3. | ಕಿರಿಯ ಸಹಾಯಕ | 01 |
| 4. | ವಾಹನ ಚಾಲಕ | 01 |
| 5. | ಜಮೇದಾರ್ | 02 |
| | ಒಟ್ಟು ಹುದ್ದೆಗಳು | 07 |

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 601 ಸಅಸೇ 2010 ಬೆಂಗಳೂರು, ದಿನಾಂಕ: 23.12.2010.**

ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಇವರ ಆಪ್ತಶಾಖೆಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 13.10.2009ರಿಂದ ಎರಡು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಗ್ರೇಡ್–2) | 01 |
| 2. | ಆಪ್ತ ಸಹಾಯಕರು (ಶೀಘ್ರಲಿಪಿಗಾರರು) | 02 |
| 3. | ಕಿರಿಯ ಸಹಾಯಕ | 01 |
| 4. | ವಾಹನ ಚಾಲಕ | 01 |
| 5. | **ಜಮೇದಾರ್** | 02 |
| | **ಒಟ್ಟು ಹುದ್ದೆಗಳು** | 07 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆಯೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್ 249

ಸಿಆಸುಇ (ಸೇವೆಗಳು–3)

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ನಿಂಗಪ್ಪ ಎಸ್. ಶಿವಪ್ಪನವರ್, ದಲಾಯತ್, ಜಿಲ್ಲಾ ಪೊಲೀಸ್ ಕಛೇರಿ, ದಾವಣಗೆರೆ ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ.05/ಸಿಬ್ಬಂದಿ–4/2010–11 ದಿನಾಂಕ 28–10–2010.

**ಪ್ರಸ್ತಾವನೆ:**

ಶ್ರೀ ನಿಂಗಪ್ಪ ಎಸ್.ಶಿವಪ್ಪನವರ್, ಎಎಸ್‌ಐ ರವರು ಅನುಕಂಪದ ಆಧಾರದ ಮೇಲೆ 2 ವರ್ಷಗಳ ಖಾಯಂಪೂರ್ವ ಸೇವಾ ಅವಧಿಯಲ್ಲಿರುವಂತೆ ದಲಾಯತ್ ಹುದ್ದೆಗೆ ನೇಮಕಗೊಂಡು ದಿನಾಂಕ 15–12–2006 ರಂದು ಜಿಲ್ಲಾ ಪೊಲೀಸ್ ಕಛೇರಿ, ದಾವಣಗೆರೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿರುತ್ತಾರೆ. ಸದರಿಯವರ ಖಾಯಂಪೂರ್ವ ಅವಧಿ ದಿನಾಂಕ 15–12–2008ಕ್ಕೆ ಪೂರ್ಣಗೊಂಡಿರುತ್ತದೆ. ಸದರಿ ಅವಧಿಯಲ್ಲಿ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ರವರು ದಿನಾಂಕ 10–06–2008 ರಲ್ಲಿ ಇವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿರುವ ಮೇರೆಗೆ ಇವರಿಗೆ ನೀಡಿರುವ ಶಿಕ್ಷೆ ದಿನಾಂಕ 14–12–2010ರವರೆಗೆ ಚಾಲ್ತಿಯಲ್ಲಿರುತ್ತದೆ.

ಆದ್ದರಿಂದ ಶಿಕ್ಷಾ ಅವಧಿಯು ಪೂರ್ಣಗೊಂಡ ನಂತರವೇ ಇವರ ಖಾಯಂ ಪೂರ್ವ ಅವಧಿಯನ್ನು ತೃಪ್ತಿಕರವೆಂದು ಘೋಷಿಸಬೇಕಾಗಿರುವುದರಿಂದ ಕೆಸಿಎಸ್ (ಪರಿವೀಕ್ಷಣಾ) ನಿಯಮಾವಳಿ 1977 ರ ನಿಯಮ 4(1) (ii)ರ ಮೇರೆಗೆ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ರವರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ದಿನಾಂಕ 14–12–2009 ರವರೆಗೆ ಖಾಯಂಪೂರ್ವ ಅವಧಿಯನ್ನು ವಿಸ್ತರಿಸಿರುತ್ತಾರೆ. ಸದರಿಯವರ ಖಾಯಂಪೂರ್ವ ಸೇವಾ ಅವಧಿ ತೃಪ್ತಿಕರವಾಗಿದ್ದು, ಹಾಲಿ ಅವರ ವಿರುದ್ಧ ಚಾಲ್ತಿ ಶಿಕ್ಷೆ ಇರುವುದರಿಂದ ದಿನಾಂಕ 15–12–2009ರಿಂದ 14–12–2010 ರವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 48 ಪೊಸಿಲಿ 2010, ಬೆಂಗಳೂರು, ದಿನಾಂಕ: 13.01.2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ನಿಂಗಪ್ಪ ಎಸ್. ಶಿವಪ್ಪನವರ್ ದಲಾಯತ್ ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 15–12–2009 ರಿಂದ 14–12–2010ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್ ರವಿಪ್ರಕಾಶ್**

ಪಿ.ಆರ್ 250

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಬಾಗಲಕೋಟೆ ಜಿಲ್ಲೆ, ಬನಹಟ್ಟಿಯ ದಿ ಬನಹಟ್ಟಿ ಸಹಕಾರಿ ನೂಲಿನ ಗಿರಣಿ ನಿಯಮಿತದ ಆಧುನೀಕರಣ ಯೋಜನೆಗಾಗಿ ಬಿಡುಗಡೆ ಮಾಡಿರುವ ` 585.00 ಲಕ್ಷಗಳ ಅವಧಿ ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ 5–11–2007ರ ಸಇ 01 ಸಿಐಎಂ 2005ನೇ ಸಂಖ್ಯೆಯ ಸರ್ಕಾರದ ಆದೇಶ.
2) ದಿನಾಂಕ 29–03–2008ರ ಸಇ 1 ಸಿಐಎಂ 2005ನೇ ಸಂಖ್ಯೆಯ ಸರ್ಕಾರದ ಆದೇಶ.
3) ದಿನಾಂಕ 15–01–2010ರ ವಾಕೈ 26 ಸಿಐಎಂ 2008ನೇ ಸಂಖ್ಯೆಯ ಸರ್ಕಾರದ ಆದೇಶ.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ ಬನಹಟ್ಟಿಯ ದಿ ಬನಹಟ್ಟಿ ಸಹಕಾರಿ ನೂಲಿನ ಗಿರಣಿ ನಿಯಮಿತದ ಆಧುನೀಕರಣ ಯೋಜನೆಗೆ `13.05 ಕೋಟಿಗಳ ಆರ್ಥಿಕ ಸಹಾಯವನ್ನು ಮಂಜೂರು ಮಾಡಿ, ದಿನಾಂಕ 5.11.2007ರ ಸರ್ಕಾರದ ಆದೇಶವನ್ನು ಹೊರಡಿಸಲಾಗಿತ್ತು. ಈ `13.05 ಕೋಟಿಗಳ ಪೈಕಿ, `11.70 ಕೋಟಿಗಳನ್ನು ಅವಧಿ ಸಾಲವಾಗಿ ಮಂಜೂರು ಮಾಡಲಾಗಿರುತ್ತದೆ. ಹಾಗೂ ಸದರಿ ಮೊತ್ತಗಳನ್ನು ಶೇ. 25, ಶೇ.50 ಮತ್ತು ಶೇ. 25ರ ಕಂತುಗಳ ಪ್ರಕಾರ ಬಿಡುಗಡೆ ಮಾಡಲು ಆದೇಶಿಸಲಾಗಿರುತ್ತದೆ. ದಿನಾಂಕ 29–03–2008ರ ಸರ್ಕಾರದ ಆದೇಶದ ಮೂಲಕ ಅವಧಿ ಸಾಲದ ಶೇ. 25, ಅಂದರೆ `292.50 ಲಕ್ಷಗಳನ್ನು ಗಿರಣಿಗೆ ಬಿಡುಗಡೆ ಮಡಲಾಗಿರುತ್ತದೆ. ನಂತರ ದಿನಾಂಕ 15.01.2010ರ ಸರ್ಕಾರದ ಆದೇಶದ ಮೂಲಕ ಅವಧಿ ಸಾಲದ ಶೇ 50, ಅಂದರೆ `585.00 ಲಕ್ಷಗಳನ್ನು ಗಿರಣಿಗೆ ಬಿಡುಗಡೆ ಮಾಡಲಾಗಿರುತ್ತದೆ.

ದಿನಾಂಕ 15.1.2010ರ ಸರ್ಕಾರದ ಆದೇಶದ ಮೂಲಕ ದಿ ಬನಹಟ್ಟಿ ಸಹಕಾರಿ ನೂಲಿನ ಗಿರಣಿ ನಿಯಮಿತದ ಆಧುನೀಕರಣ ಯೋಜನೆಗೆ ಬಿಡುಗಡೆ ಮಾಡಲಾಗಿರುವ `585.00 ಲಕ್ಷಗಳ ಅವಧಿ ಸಾಲವನ್ನು ಗಿರಣಿಯ ಸರ್ಕಾರಕ್ಕೆ ಮರುಪಾವತಿಸಲು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸುವ ಸಲುವಾಗಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ವಾಕೈ 26 ಸಿಐಎಂ 2008 (II), ಬೆಂಗಳೂರು, ದಿನಾಂಕ: 13–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಬಾಗಲಕೋಟೆ ಜಿಲ್ಲೆ, ಬನಹಟ್ಟಿಯ ದಿ ಬನಹಟ್ಟಿ ಸಹಕಾರಿ ನೂಲಿನ ಗಿರಣಿ ನಿಯಮಿತದ ಆಧುನೀಕರಣ ಯೋಜನೆಗೆ ಬಿಡುಗಡೆ ಮಾಡಲಾಗಿರುವ `585.00 ಲಕ್ಷಗಳ ಅವಧಿ ಸಾಲವನ್ನು ಗಿರಣಿಯ ಸರ್ಕಾರಕ್ಕೆ ಮರುಪಾವತಿ ಮಾಡುವ ಸಲುವಾಗಿ, ಷರತ್ತು ಮತ್ತು ನಿಬಂಧನೆಗಳನ್ನು, ಈ ಆದೇಶದ ಅನುಬಂಧದ ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 05.01.2011ರ ವಾಕೈ 5 ಆಂಅಸ (1) 2011ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿಯ ಮೂಲಕ ನೀಡಲಾಗಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸಹಕಾರಿ ಸಕ್ಕರೆ)

### Annexure to the Government Order No. CI 26 CIM 2008 (II) Dated 13.01.2011

Essential details of Loans sanctioned vide
G.O. No. CI 26 CIM 2008 dated 15.01.2010

**LOANS AND ADVANCES BY STATE GOVERNMENT**

| | |
|---|---|
| 1.Sanction Authority | Government of Karnataka |
| 2. Sanction (G.O. No. and date) | CI 26 CIM 2008 dated 15.01.2010 |
| 3. To whom sanctioned | The Banahatti Co- operative Spinning Mills Ltd., Banahatti, Bagalkot District. |
| 4. Amount Sactioned (in words and figures) | ` 585.00 lakhs (Ruppes five haundred eighty five lakhs only |
| 5. Sanction valid upto | Not applicable |
| 6. purpose of the Loan | Modernization of the Mill |
| 7. Payable in cash or adjustment | Payable in cash |
| 8. Plan or Non-plan | Plan |
| 9. Head of Account to which the loan is debitable | 6860-01-101-0-07-394 (Loans) |
| 10.Progressive amount of loan sanctioned to date in the financial year. | Amount ` in lakhs<br>---------------------------------------------------------------<br>G.O.No.CI 26 CIM 2008<br>Dated 15.01.2010 585.00 |
| 11. Period of Loan | 10 Years |
| 12. Moratorium towards repayment, if any | No Moratorium |

| | |
|---|---|
| 13. Date and year from which repayment is to commence | The repayment shall be in 10 equal installments starting from I st of next April. |
| 14. Mode of repayment | DD or cash |
| 15. Interest<br>a) Normal rate<br>b) Penal rate of interest in the event of default in Repayment / interest Payment<br>c) Mode of recovery of interest | <br>9%<br>1%<br><br>Along with Principal and interest on outstanding balance commencing from Ist of next April. |
| 16. Adjustment of overdue loans, if any | -- |
| 17. Authority who countersigns the payees's receipt | Commissioner for Textiles and Director of Handlooms, Bangalore |
| 18. Authority who maintains loan Ledger and watched recovery | Commissioner for Textiles and Director of Handlooms, Bangalore |
| 19. Authority responsible for reconcilation and monitoring of loan. | Commissioner for Textiles and Director of Handlooms, Bangalore |
| 20. Authority to whom utilization certificates are to be given | Commissioner for Textiles and Director of Handlooms, Bangalore |
| 21. Authority who should furnish estimate of recovery of loan and interest for inclusion in the Budget Estimates | Commissioner for Textiles and Director of Handlooms, Bangalore |

**C. SREENIVAS**
Under Secretary to Govrnment
Commerce and Industries Department
(Co-operative Sugar)

ಪಿ.ಆರ್ 256

## ಯುವಜನ ಸೇವಾ ಸಚಿವಾಲಯ

**ವಿಷಯ** : ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಜಕ್ಕೂರು, ಬೆಂಗಳೂರು, ಇಲ್ಲಿ ಸಹಾಯಕ ವಿಮಾನ ಬೋಧಕರ ಎರಡು ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡುವ ಬಗ್ಗೆ

**ಓದಲಾಗಿದೆ :** ನಿರ್ದೇಶಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಜಕ್ಕೂರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಎಫ್‌ಟಿಎಸ್ 24 ಎಡಿಎಂ/ 2010–11/528, ದಿನಾಂಕ: 31–08–2010

**ಪ್ರಸ್ತಾವನೆ:**

ನಿರ್ದೇಶಕರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಜಕ್ಕೂರು, ಬೆಂಗಳೂರು, ಅವರು ಮೇಲೆ ಓದಲಾದ ದಿನಾಂಕ: 31–08–2010ರ ಪತ್ರದಲ್ಲಿ ಶಾಲೆಯಲ್ಲಿ ವೈಮಾನಿಕ ಹಾರಾಟ ಚಟುವಟಿಕೆಗಳನ್ನು ಪ್ರಾರಂಭಿಸುವ ದೃಷ್ಟಿಯಿಂದ ನವದೆಹಲಿಯ ನಾಗರೀಕ ವಿಮಾನಯಾನ ಮಹಾ ನಿರ್ದೇಶಕರ ನಿಯಮಾವಳಿಯಂತೆ ಶಾಲೆಯಲ್ಲಿ ಖಾಲಿಯಿರುವ ವಿಮಾನ ಭೋಧಕರ 2 ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ತುಂಬಲು ದಿನಾಂಕ: 18–06–2009ರಂದು ಜರುಗಿದ ಶಾಲೆಯ ಆಡಳಿತ ಮಂಡಳಿಯ ಏಳನೇ ಸಭೆಯಲ್ಲಿ ನಿರ್ಣಯ ಕೈಗೊಳ್ಳಲಾಗಿತ್ತು. ಅದರಂತೆ ದಿ: 05–06–2010ರಂದು ನೀಡಲಾದ ಪ್ರಕಟಣೆಗೆ 33 ಅರ್ಜಿಗಳು ಸ್ವೀಕೃತಗೊಂಡಿದ್ದು, ಅವುಗಳಲ್ಲಿ 11 ಮಂದಿಗೆ ಸಂದರ್ಶನಕ್ಕೆ ಹಾಜರಾಗಲು ತಿಳಿಸಿದ್ದು, ದಿನಾಂಕ: 30–08–2010ರಂದು ಜರುಗಿದ ಸಂದರ್ಶನದಲ್ಲಿ ಈ ಕೆಳಕಂಡ ಅಭ್ಯರ್ಥಿಗಳು ಆಯ್ಕೆಯಾಗಿರುವುದಾಗಿ ತಿಳಿಸಿದ್ದಾರೆ.

1. ಶ್ರೀ ಎಸ್. ಅರ್ಜುನ್, ನಂ. 738, 16ನೇ ಮುಖ್ಯರಸ್ತೆ, 3ನೇ ಸೆಕ್ಟರ್, ಹೆಚ್.ಎಸ್.ಆರ್. ಬಡಾವಣೆ, ಬೆಂಗಳೂರು–560102.
2. ಕುಮಾರಿ ಮಧುರಿಮ ಮುಖರ್ಜಿ, 16/4/1, ಕಾಜಿತಗಮ್ ಬೈ ಲೇನ್, ಮಿಲನ್ ಮಂದಿರ್ ಲೈಬ್ರರಿ ಎದುರು, ಹೌರಾ –711104, ಪಶ್ಚಿಮ ಬಂಗಾಳ

ಮೇಲಿನ ಅಭ್ಯರ್ಥಿಗಳನ್ನು ಮಾಸಿಕ ರೂ. 50.000/–ಗಳ (ಐವತ್ತು ಸಾವಿರ ರೂಪಾಯಿಗಳು) ಗುತ್ತಿಗೆ ವೇತನದ ಆಧಾರದ ಮೇಲೆ ಒಂದು ವರ್ಷದ ಅವಧಿಗೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 06 ಯುರಾಸೇ 10 ಬೆಂಗಳೂರು ದಿನಾಂಕ: 05–01–2011.**

ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಜಕ್ಕೂರು, ಬೆಂಗಳೂರು, ಇಲ್ಲಿ ಖಾಲಿಯಿರುವ ಎರಡು ಸಹಾಯಕ ವಿಮಾನ ಬೋಧಕರ ಹುದ್ದೆಗಳಿಗೆ ಆಯ್ಕೆ ಸಮಿತಿಯ ಮೂಲಕ ಆಯ್ಕೆಗೊಂಡ ಈ ಕೆಳಕಂಡ ಅಭ್ಯರ್ಥಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ರೂ. 50,000/– (ಐವತ್ತು ಸಾವಿರ ರೂಪಾಯಿಗಳು) ಗಳ ಗುತ್ತಿಗೆ ವೇತನದ ಆಧಾರದ ಮೇಲೆ ನೇಮಿಸಿಕೊಳ್ಳಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಶ್ರೀ ಎಸ್. ಅರ್ಜುನ್,
   ನಂ.738, 16ನೇ ಮುಖ್ಯರಸ್ತೆ 3ನೇ ಸೆಕ್ಟರ್, ಹೆಚ್.ಎಸ್.ಆರ್. ಬಡಾವಣೆ, ಬೆಂಗಳೂರು–560102.
2. ಕುಮಾರಿ. ಮಧುರಿಮ ಮುಖರ್ಜಿ, 16/4/1, ಕಸಿಟ್‌ಗಾಂ ಬೈಲೇನ್,
   ಮಿಲನ್ ಮಂದಿರ್ ಲೈಬ್ರರಿ ಎದುರು,
   ಹೌರಾ –711104, ಪಶ್ಚಿಮ ಬಂಗಾಳ.

ಇವರ ಗುತ್ತಿಗೆ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳ ಕುರಿತು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 1438 ಸೇ-1/2010, ದಿನಾಂಕ: 30-09-2010ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್ 257 ಸರ್ಕಾರದ ಅಧೀನ ಕಾರ್ಯದರ್ಶಿ

ಯುವಜನ ಸೇವಾ ಇಲಾಖೆ

## ಯುವಜನ ಸೇವಾ ಸಚಿವಾಲಯ

**ವಿಷಯ** : ಶ್ರೀ ಬಿ.ಬಿ. ಬಿದ್ದಪ್ಪ, ಹಾಕಿ ತರಬೇತಿದಾರರು, ಕೂಡಿಗೆ ಕ್ರೀಡಾ ಶಾಲೆ, ಕರ್ನಾಟಕ ಕ್ರೀಡಾ ಪ್ರಾಧಿಕಾರ, ಅವರ ವೈದ್ಯಕೀಯ ಚಿಕಿತ್ಸೆಗಾಗಿ ಮುಂಗಡವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ: ಕಕ್ರೀಪ್ರಾ/ಸಿ3/35/ಇತರೇ/10-11, ದಿನಾಂಕ: 10-01-2011 ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಮತ್ತು ಮಹಾ ನಿರ್ದೇಶಕರು, ಕರ್ನಾಟಕ ಕ್ರೀಡಾ ಪ್ರಾಧಿಕಾರ, ಬೆಂಗಳೂರು, ಅವರಿಂದ.

**ಪ್ರಸ್ತಾವನೆ:**

ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಮತ್ತು ಮಹಾ ನಿರ್ದೇಶಕರು, ಕರ್ನಾಟಕ ಕ್ರೀಡಾ ಪ್ರಾಧಿಕಾರ, ಅವರು ಮೇಲೆ ಓದಲಾದ ದಿನಾಂಕ: 10-01-2011ರ ಪತ್ರದಲ್ಲಿ ಶ್ರೀ ಬಿ.ಬಿ. ಬಿದ್ದಪ್ಪ, ಹಾಕಿ ತರಬೇತುದಾರರು, ಕೂಡಿಗೆ ಕ್ರೀಡಾ ಶಾಲೆ, ಕರ್ನಾಟಕ ಕ್ರೀಡಾ ಪ್ರಾಧಿಕಾರ, ಅವರು ಹೃದಯಾಘಾತ ಮತ್ತು ಲಕ್ವದಿಂದಾಗಿ ಸಿ.ಎಸ್.ಐ. ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆ (ಮಿಷನ್ ಆಸ್ಪತ್ರೆ) ಇಲ್ಲಿಗೆ ದಾಖಲು ಮಾಡಲ್ಪಟ್ಟಿದ್ದು, ಅವರಿಗೆ ತುರ್ತು ಚಿಕಿತ್ಸೆಯಿರುವ ಕಾರಣ ಮಾನವೀಯತೆ ದೃಷ್ಟಿಯಿಂದ ಚಿಕಿತ್ಸೆಗೆ ತಗಲುವ ರೂ. 2.50 ಲಕ್ಷಗಳನ್ನು (ಎರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು) ಬಿಡುಗಡೆ ಮಾಡುವಂತೆ ಕೋರಿದ್ದಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಹಾಗೂ ಅವರ ಪತ್ರಕ್ಕೆ ಲಗತ್ತಿಸಲಾದ ಸಿ.ಎಸ್.ಐ. ಹೋಲ್ಡ್ಸ್‌ವರ್ತ್ ಮೆಮೋರಿಯಲ್ (ಮಿಷನ್ ಆಸ್ಪತ್ರೆ) ಆಸ್ಪತ್ರೆ ವೈದ್ಯರ ಅಂದಾಜು ಪತ್ರವನ್ನು ಪರಿಶೀಲಿಸಿದ ನಂತರ ನಿಯಮಾನುಸಾರ ಚಿಕಿತ್ಸೆಗಾಗಿ ಮುಂಗಡವನ್ನು ಬಿಡುಗಡೆ ಮಾಡಲು ಪ್ರಸ್ತಾಪಿಸಿ, ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 07 ಯುಇಸೇ11 ಬೆಂಗಳೂರು, ದಿನಾಂಕ: 11-01-2011.**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಎಸ್‌ಎಂಆರ್ 2008, ದಿನಾಂಕ: 26-01-2009ರ ಅನುಸಾರ ಶ್ರೀ ಬಿ.ಬಿ. ಬಿದ್ದಪ್ಪ, ಹಾಕಿ ತರಬೇತುದಾರರು, ಕೂಡಿಗೆ ಕ್ರೀಡಾ ಶಾಲೆ, ಕರ್ನಾಟಕ ಕ್ರೀಡಾ ಪ್ರಾಧಿಕಾರ, ಅವರು ಹೃದಯಾಘಾತ ಮತ್ತು ಲಕ್ವದಿಂದಾಗಿ ಮೈಸೂರಿನ ಸಿ.ಎಸ್.ಐ. ಹೋಲ್ಡ್ಸ್‌ವರ್ತ್ ಮೆಮೋರಿಯಲ್ (ಮಿಷನ್ ಆಸ್ಪತ್ರೆ) ಆಸ್ಪತ್ರೆಯಲ್ಲಿ ಪಡೆಯುವ ಚಿಕಿತ್ಸೆಯ ಒಟ್ಟು ವೆಚ್ಚದ ಪೈಕಿ ರೂ. 2 ಲಕ್ಷಗಳನ್ನು (ಎರಡು ಲಕ್ಷ ರೂಪಾಯಿಗಳು) ಮುಂಗಡವಾಗಿ ಅಂತಿಮ ಬಿಲ್ ಕ್ಲೈಮು ಮಾಡುವಾಗ ಸರಿಹೊಂದಿಸಿಕೊಳ್ಳುವ ಷರತ್ತಿಗೊಳಪಟ್ಟು ಈ ಮೂಲಕ ಬಿಡುಗಡೆ ಮಾಡಲಾಗಿದೆ.

ಈ ಮೊತ್ತದ ಮುಂಗಡ ಠೇವಣಿ ಹಣವನ್ನು ಕ್ರಾಸ್ಡ್ ಚೆಕ್ ಮೂಲಕ ಸಿ.ಎಸ್.ಐ. ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆ (ಮಿಷನ್ ಆಸ್ಪತ್ರೆ), ಪಿ.ಬಿ.ನಂ.38, ಮೈಸೂರು-570021 ಇಲ್ಲಿಗೆ ಕಳುಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಆಇ 9 ಟಿಎಫ್‌ಪಿ 2009 (2) ದಿನಾಂಕ: 21-01-2010ರ ಆದೇಶದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆಯೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್ 258 ಸರ್ಕಾರದ ಅಧೀನ ಕಾರ್ಯದರ್ಶಿ

ಯುವಜನ ಸೇವಾ ಇಲಾಖೆ

## ಶಿಕ್ಷಣ ಸಚಿವಾಲಯ

### <u>ಸೇರ್ಪಡೆ ಆದೇಶ</u>

**ಸಂಖ್ಯೆ: ಇಡಿ 298 ಯೋಯೋಕ 2009, ಬೆಂಗಳೂರು, ದಿನಾಂಕ:** 25.01.2011

**ವಿಷಯ** : ರಾಜ್ಯದಲ್ಲಿರುವ 699 ಖಾಸಗಿ ಅನುದಾನರಹಿತ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿರುವ ಶಿಕ್ಷಕರು ಮತ್ತು ಸಿಬ್ಬಂದಿಗಳಿಗೆ ದಿನಾಂಕ: 01.04.2010ರಿಂದ ಅನ್ವಯವಾಗುವಂತೆ ವೇತನಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ** : 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 298 ಯೋಯೋಕ 2009 ದಿ: 01.09.2010.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 124 ಎಸ್‌ಇಪಿ 2009 ದಿ: 09.07.2009.

1. ರಾಜ್ಯದಲ್ಲಿನ 699 ಖಾಸಗಿ ಅನುದಾನರಹಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿನ ಶಿಕ್ಷಕರು ಮತ್ತು ಸಿಬ್ಬಂದಿಗಳನ್ನು ಒಳಗೊಂಡಂತೆ ಶಾಲೆಗಳನ್ನು ಸಹಾಯಾನುದಾನಕ್ಕೆ ಒಳಪಡಿಸಿ, ಈಗಾಗಲೇ ಆದೇಶ ಹೊರಡಿಸಿದೆ. ಅಂತಹ 699 (ಪ್ರಾಥಮಿಕ 315 ಮತ್ತು ಪ್ರೌಢ 383) ಶಾಲೆಗಳ ವಿವರಗಳನ್ನು ಒಳಗೊಂಡ ಪಟ್ಟಿಯನ್ನು ಆದೇಶದೊಡನೆ ಅನುಬಂಧದಲ್ಲಿ ಲಗತ್ತಿಸಿ, ಈ ಶಾಲೆಗಳಲ್ಲಿನ ಶಿಕ್ಷಕರು ಮತ್ತು ಸಿಬ್ಬಂದಿಗಳಿಗೆ 01.04.2010ರಿಂದ ಅನ್ವಯವಾಗುವಂತೆ ವೇತನಾನುದಾನವನ್ನು ಕೆಲವು ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಅನುಮೋದಿಸಿ ಉಲ್ಲೇಖ (1) ರ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

2. ಈ 699 ಶಾಲೆಗಳ ಪಟ್ಟಿಯಲ್ಲಿ NES ಕನ್ನಡ ಮಾಧ್ಯಮ ಪ್ರೌಢಶಾಲೆ, ಚಿತ್ತಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಈ ಪ್ರೌಢಶಾಲೆಯೂ ಸಹ ಸೇರ್ಪಡೆಯಾಗಿದ್ದು, ಶಾಲೆಗಳ ಪಟ್ಟಿಯನ್ನು ಬೆರಳಚ್ಚು ಮಾಡುವಾಗ ಈ ಶಾಲೆಯ ಹೆಸರು ಕೈಬಿಟ್ಟು ಹೋಗಿರುವ ಪ್ರಯುಕ್ತ ಮತ್ತೊಮ್ಮೆ ಪರಿಶೀಲಿಸಿ ಈ ಶಾಲೆಯನ್ನು ಸೇರ್ಪಡೆ ಮಾಡಲಾಗಿದೆ.

3. ಸರ್ಕಾರಿ ಆದೇಶ ಸಂಖ್ಯೆ ಇಡಿ 298 ಯೋಯೋಕ 2009 ದಿನಾಂಕ: 01.09.2010ರ ಅನುಬಂಧ ಪ್ರೌಢಶಾಲೆಗಳ ಪಟ್ಟಿಯಲ್ಲಿ ಕ್ರಮ ಸಂಖ್ಯೆ 383ರ ನಂತರ ಕ್ರಮ ಸಂಖ್ಯೆ 384ನೇ ಪ್ರೌಢಶಾಲೆಯನ್ನಾಗಿ ಈ ಕೆಳಕಂಡ ಪ್ರೌಢಶಾಲೆಯನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

4. ಸದರಿ ದಿನಾಂಕ: 01.09.2010ರ ಆದೇಶದ ಷರತ್ತುಗಳು ಕೆಳಕಂಡ ಶಾಲೆಗೂ ಯಥಾವತ್ತಾಗಿ ಅನ್ವಯವಾಗುತ್ತದೆ.

| ಕ್ರಮ ಸಂಖ್ಯೆ | ಶಾಲೆಯ ಹೆಸರು ಮತ್ತು ವಿಳಾಸ | ವೇತನಾನುದಾನಕ್ಕೆ ಒಳಪಡಿಸಿದ ಆದೇಶದ ಸಂಖ್ಯೆ ಹಾಗೂ ದಿನಾಂಕ, ಹುದ್ದೆಗಳು | ಸಹಾಯಾನುದಾನಕ್ಕೆ ಒಳಪಡಿಸಿದ ಶಿಕ್ಷಕರ ಮತ್ತು ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳ ಸಂಖ್ಯೆ. |
|---|---|---|---|
| 384 | NES ಕನ್ನಡ ಮಾಧ್ಯಮ ಪ್ರೌಢಶಾಲೆ, ಚಿತ್ತಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಇಡಿ 124 ಎಸ್‌ಇಪಿ 2009 ದಿನಾಂಕ: 09.07.2009 | 6+1 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್ 259

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿ ಕುರಿತು.

**ಓದಲಾಗಿದೆ:**
1) ಉಪ ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–15/ಸಿಆರ್ 5/2010 ಚಿಕ್ಕಮಗಳೂರು, ದಿನಾಂಕ 03–10–2010.
2) ತನಿಖಾಧಿಕಾರಿಯ ಅಂತಿಮ ವರದಿ.
3) ತನಿಖಾ ದಾಖಲೆಗಳಾದ ಮೆಮೋ ಆಫ್ ಎವಿಡೆನ್ಸ್ ಮತ್ತು ವಿವರ, ಪ್ರಥಮ ವರ್ತಮಾನ ವರದಿ, ಫಿರ್ಯಾದುದಾರರ ದೂರು, ಪಂಚರ ಕೋರಿಕೆ ಪತ್ರಗಳು, ಪ್ರಾಯೋಗಿಕ ಮತ್ತು ರಿಕವರಿ ಮಹಜರ್‌ಗಳು ಹಾಗೂ ಮಾಲು ಪಟ್ಟಿಗಳು, ಮತ್ತು ಆಪಾದಿತರ ಸಮಜಾಯಿಷಿ ಪತ್ರ, ನೋಟುಗಳ ಹೊಂದಾಣಿಕೆ ವಿವರ ಮತ್ತು ಸೀಲು ಸ್ವೀಕೃತಿ ಪತ್ರ, ರಾಸಾಯನಿಕ ತಜ್ಞರ ಪರೀಕ್ಷಾ ವರದಿ, ಕೃತ್ಯ ನಡೆದ ಸ್ಥಳದ ನಕ್ಷೆ, ರಿಮ್ಯಾಂಡ್ ಅರ್ಜಿ, ಸಾಕ್ಷೀದಾರರ ಹೇಳಿಕೆಗಳು, ತನಿಖಾ ಕಾಲದಲ್ಲಿ ಅಮಾನತ್ತುಪಡಿಸಿಕೊಂಡ ದಾಖಲಾತಿಗಳು/ ಠಾಣಾ ದಿನಚರಿ ಪ್ರತಿ, ತನಿಖಾ ಕಾಲದ ವಿವಿಧ ಹಂತಗಳಲ್ಲಿ ತೆಗೆಯಿಸಿದ ಫೋಟೋಗಳು.

**ಪ್ರಸ್ತಾವನೆ:**

ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರ ವಿರುದ್ಧ ಗುನ್ನೆ ಸಂಖ್ಯೆ: 5/2010, ದಿನಾಂಕ 27–05–2010ರಲ್ಲಿ ಪೋಲೀಸ್ ಉಪಾಧೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಇವರು ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರ ದಿನಾಂಕ 03–10–2010ರಲ್ಲಿ ಶ್ರೀ ರವಿ ಓಜನಹಳ್ಳಿ, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1) (ಸಿ)ರ ಅನ್ವಯ ಸಕ್ಷಮ ಪ್ರಾಧಿಕಾರದ ಮಂಜೂರಾತಿಯನ್ನು ನೀಡಲು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಉಪ ಪೋಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(1) ಫಿರ್ಯಾದುದಾರರಾದ ಶ್ರೀ ರಘು ಬಿನ್ ಗೋವಿಂದಪ್ಪ, 40 ವರ್ಷ ಅಡುಗೆ ಕೆಲಸ, ವಾಸ ತ್ಯಾಗರಾಜನಗರ, ಕಡೂರು ಟೌನ್, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ಫಿರ್ಯಾದು ದಿನಾಂಕ 27–05–2010.

(2) ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಪೋಲೀಸ್ ಠಾಣೆ ಪ್ರಕರಣ ಸಂಖ್ಯೆ: 05/2010

(3) ಪ್ರಾಯೋಗಿಕ ಪಂಚನಾಮೆ ದಿನಾಂಕ 27–05–2010

(4) ಟ್ರ್ಯಾಪ್ ಮಹಜರ್ ದಿನಾಂಕ 27.05.2010.

(5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: RACE/CKM/LOK/19/10–11, ದಿನಾಂಕ 24.06.2010.

(6) ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ನಂ.1ನೇ ಉಪವಿಭಾಗ, ಚಿಕ್ಕಮಗಳೂರು ಈ ಕಛೇರಿಯ ಕಿರಿಯ ಇಂಜಿನಿಯರ್ ಆದ ಶ್ರೀ ಜಿ.ಪಿ. ಶಶಿಧರ್ ರವರು ತಯಾರಿಸಿದ ಕೃತ್ಯ ನಡೆದ ಸ್ಥಳದ ನಕಾಶೆ ದಿನಾಂಕ 17–06–2010.

(7) **ಸಾಕ್ಷಿಗಳ ಹೇಳಿಕೆಗಳು:–**

(i) ಶ್ರೀ ರಘು ಬಿನ್ ಗೋವಿಂದಪ್ಪ, 40 ವರ್ಷ, ಅಡುಗೆ ಕೆಲಸ, ವಾಸ:ತ್ಯಾಗರಾಜನಗರ, ಕಡೂರು, ಚಿಕ್ಕಮಗಳೂರು ಜಿಲ್ಲೆ.

(ii) ಶ್ರೀಮತಿ ಎಂ.ಬಿ. ಸರೋಜ ಕೋಂ ಜಯಪ್ಪ, 35 ವರ್ಷ, ಪ್ರಥಮ ದರ್ಜೆ ಸಹಾಯಕರು, ಆರ್.ಎಫ್.ಓ.ಕಛೇರಿ, ಚಿಕ್ಕಮಗಳೂರು.

(iii) ಶ್ರೀ ಅರುಣ್ ಕುಮಾರ್ ಬಿನ್ ಲೇಟ್ ಹೆಚ್.ಸಿ. ನಾಗರಾಜು, 34 ವರ್ಷ, ದ್ವಿತೀಯ ದರ್ಜೆ ಸಹಾಯಕರು, ಎ.ಸಿ.ಎಫ್. ಕಛೇರಿ, ಚಿಕ್ಕಮಗಳೂರು.

(iv) ಶ್ರೀಮತಿ ಜಾನಕಿ ಕೋಂ ಕೃಷ್ಣಮೂರ್ತಿ, 50 ವರ್ಷ, ವಾಸ ಬೇಲೂರು ರಸ್ತೆ, ಕೀರ್ತಿ ಕ್ಯಾಂಟೀನ್, ಚಿಕ್ಕಮಗಳೂರು.

(v) ಶ್ರೀ ಹೆಚ್.ಆರ್. ಶಂಕರ್ ಬಿನ್ ಹೆಚ್.ಎನ್. ರಾಮಯ್ಯ, 38 ವರ್ಷ, ಸಹಾಯಕ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಹಾಸನ ಹೆಚ್ಚಿನ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು.

(vi) ಶ್ರೀ ಜೆಸಿ. ಶಶಿಧರ್ ಬಿನ್ ಪುಟ್ಟಸ್ವಾಮಿ, 40 ವರ್ಷ, ಜೂನಿಯರ್–ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ನಂ.1 ಉಪವಿಭಾಗ, ಚಿಕ್ಕಮಗಳೂರು.

(vii) ಶ್ರೀ ವಿ.ಹೆಚ್. ಕೃಷ್ಣಮೂರ್ತಿ, ಪೌರಾಯುಕ್ತರು, ನಗರಸಭೆ, ಚಿಕ್ಕಮಗಳೂರು.

(viii) ಶ್ರೀ ಎಸ್. ಮಂಜುನಾಥ್, ಸಹಾಯಕ ರಾಸಾಯನಿಕ ಪರೀಕ್ಷಕರು, ಮಲ್ಲೇಗೌಡ ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು.

(ix) ಶ್ರೀಮತಿ ಕೆ.ಆರ್. ಸುನೀತ ಕೋಂ ಎಂ.ಎನ್. ದಿನೇಶ್, 33 ವರ್ಷ, ಮಹಿಳಾ ಹೆಡ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಠಾಣೆ.

(x) ಶ್ರೀ ಎಸ್.ಡಿ. ಶಿವಣ್ಣ ಬಿನ್ ದೇವಯ್ಯ, 35 ವರ್ಷ, ಪೋಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಠಾಣೆ

(xi) ಶ್ರೀ ಟಿ.ಎಸ್. ಯೋಗೀಶ್ ಬಿನ್. ಟಿ.ಆರ್.ಶೇಷಾದ್ರಿ, 35 ವರ್ಷ, ಪೋಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯಕ್ತ, ಚಿಕ್ಕ ಮಗಳೂರು ಠಾಣೆ.

(xii) ಶ್ರೀ ಬಿ.ಎಂ. ಮಹೇಶ್ ಬಿನ್ ಮಂಜುನಾಥ್ ಬಿ.ಆರ್., 29 ವರ್ಷ, ಪೋಲೀಸ್ ಕಾನ್ಸ್‌ಟೇಬಲ್ ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಠಾಣೆ.

(xiii) ಶ್ರೀ ಹೆಚ್.ಈ. ಪ್ರಸನ್ನಕುಮಾರ್ ಬಿನ್ ಹೆಚ್.ಎನ್. ಗಂಗಾಧರ್, 34 ವರ್ಷ, ಎ.ಪಿ.ಸಿ. ಚಾಲಕರು, ಪೋಲೀಸ್ ಉಪಾಧೀಕ್ಷಕರವರ ಕಛೇರಿ, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಠಾಣೆ.

(xiv) ಶ್ರೀ. ಬಿ.ಕೆ. ಪುಟ್ಟಸ್ವಾಮಚಾರ್ ಬಿನ್ ಕೃಷ್ಣಾಚಾರ್, 54 ವರ್ಷ, ಹೆಡ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಯುಕ್ತ, ಚಿಕ್ಕಮಗಳೂರು ಠಾಣೆ.

(xv) ಶ್ರೀಮತಿ ಲತಾ ಕೋಂ ರಘು, 32 ವರ್ಷ, ಗೃಹಿಣಿ, ವಾಸ: ತ್ಯಾಗರಾಜನಗರ, ಕಡೂರು, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

(xvi) ಶ್ರೀ ರಾಮನಾಯ್ಕ. ಜಿ. ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು.

(8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆ. ಶ್ರೀಮತಿ ಲತಾ ರವರ ಹೆಸರಿನಲ್ಲಿ ಕಡೂರು ತಾಲ್ಲೂಕು ಹರುವನಹಳ್ಳಿ ಗ್ರಾಮದ ಸರ್ವೆ ನಂ. 70/4ರಲ್ಲಿ ಇರುವ 0.2 ಗುಂಟೆ ಜಮೀನಿನಲ್ಲಿ ಮನೆ ಕಟ್ಟುವ ಉದ್ದೇಶಕ್ಕೆ ಶ್ರೀ ರಘು ಬಿನ್ ಗೋವಿಂದಪ್ಪ ಇವರು ತಮ್ಮ ಪತ್ನಿಯ ಪರವಾಗಿ ಅನ್ಯಸಂಕ್ರಮಣ ಮಾಡಿಸಲು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರಿಗೆ ಸಲ್ಲಿಸಿರುವ ಅರ್ಜಿ ಮತ್ತು ಇತರೆ ದಾಖಲಾತಿಗಳು

(9) ಆಪಾದಿತರಾದ ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು (ಹಾಲಿ ಅಮಾನತ್ತಿನಲ್ಲಿರುವ) ಇವರ ಸಮಜಾಯಷಿ ಹೇಳಿಕೆ ದಿನಾಂಕ 27–05–2010.

ತನಿಖಾಧಿಕಾರಿಗಳಾದ ಶ್ರೀ ಜಿ. ರಾಮನಾಯ್ಕ್, ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು–577101 ಇವರು ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಪೋಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 05/2010ರಲ್ಲಿ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಯಲ್ಲಿ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು/ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರು ಫಿರ್ಯಾದುದಾರಾದ ಶ್ರೀ ರಘು ಬಿನ್ ಗೋವಿಂದಪ್ಪ, ತ್ಯಾಗರಾಜನಗರ, ಕಡೂರು ಟೌನ್, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರು ತಮ್ಮ ಪತ್ನಿ ಶ್ರೀಮತಿ ಲತಾ ರವರ ಹೆಸರಿನಲ್ಲಿ ಕಡೂರು ತಾಲ್ಲೂಕು ಹರುವನಹಳ್ಳಿ ಗ್ರಾಮದ ಸರ್ವೆ ನಂ.70/4ರಲ್ಲಿ 2 ಗುಂಟೆ ಜಮೀನು ಇದ್ದು ಅದರಲ್ಲಿ ಮನೆ ಕಟ್ಟುವ ಉದ್ದೇಶದಿಂದ ಸದರಿ ಜಮೀನನ್ನು ಅನ್ಯಸಂಕ್ರಮಣ ಮಾಡಿಸಲು ಕೋರಿ ಶ್ರೀಮತಿ ಲತಾರವರು ಚಿಕ್ಕಮಗಳೂರು ಜಿಲ್ಲಾಧಿಕಾರಿಗಳ ಕಛೇರಿಗೆ ಅರ್ಜಿ ಸಲ್ಲಿಸಿದ್ದು, ಸದರಿ ಅರ್ಜಿ ಬಡಾವಣೆ ನಕ್ಷೆ ತಯಾರಿಸುವ ಸಂಬಂಧ ಚಿಕ್ಕಮಗಳೂರು ನಗರ ಯೋಜನಾ ಕಛೇರಿಗೆ ಬಂದಿದ್ದು, ತಾವು ಈ ಸಂಬಂಧ ತಮ್ಮ ಪತ್ನಿಯ ಪರವಾಗಿ ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು ಇವರನ್ನು ಭೇಟಿ ಮಾಡಿ ವಿಚಾರಿಸಿದಾಗ, ಶ್ರೀ ರವಿ ಓಜನಹಳ್ಳಿ, ಇವರು ತಮ್ಮ ಪತ್ನಿಯ ಕೆಲಸ ಮಾಡಿಕೊಡಲು ರೂ. 3500/– ಗಳನ್ನು ಕೊಟ್ಟರೆ ನಿಮ್ಮ ಕೆಲಸ ಮಾಡಿಕೊಡುತ್ತೇನೆ, ಇಲ್ಲದಿದ್ದರೆ ತಮ್ಮ ಕಡತವನ್ನು ಜಿಲ್ಲಾಧಿಕಾರಿಗಳ ಕಛೇರಿಗೆ ಕಳುಹಿಸುವುದಿಲ್ಲವೆಂದು ಹೇಳಿದರು. ಆಗ ತಾವು ತಮ್ಮ ಬಳಿ ಲಂಚ ಕೊಡಲು ಹಣ ಇಲ್ಲಾ ಎಂದು ಕೇಳಿಕೊಂಡಾಗ, ಅದಕ್ಕೆ ಅವರು ಒಪ್ಪದೆ, ಲಂಚ ಕೊಡದೇ ತಮ್ಮ ಕಡತವನ್ನು ಮುಂದೆ ಕಳುಹಿಸುವುದಿಲ್ಲವೆಂದು ತಿಳಿಸಿದ ಮೇರೆಗೆ ಸದರಿಯವರು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 27.05.2010 ರಂದು ಚಿಕ್ಕಮಗಳೂರಿನಲ್ಲಿ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು, ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರು ಅಕ್ರಮ ಸಂಭಾವನೆಯಾದ ರೂ. 3,500/– ಗಳನ್ನು ಚಿಕ್ಕಮಗಳೂರಿನ ಬೇಲೂರು ರಸ್ತೆಯಲ್ಲಿರುವ ಕೀರ್ತಿ ಕ್ಯಾಂಟೀನ್‌ನಲ್ಲಿ ನೆರಳು ಸಾಕ್ಷಿಯ ಸಮಕ್ಷಮ ಫಿರ್ಯಾದುದಾರರಿಂದ ಸದರಿ ಸರ್ಕಾರಿ ಕೆಲಸವನ್ನು ಮಾಡಲು ಲಂಚ ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಬೆರಳುಗಳನ್ನು ಹಾಗೂ ಅವರು ಧರಿಸಿದ್ದ ಪ್ಯಾಂಟಿನ ಬಲ ಜೇಬನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 3,500/–ಗಳನ್ನು ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರ ಪ್ಯಾಂಟಿನ ಬಲ ಜೇಬಿನಿಂದ ಚಿಕ್ಕಮಗಳೂರಿನಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಉಪ ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತನಿಖಾ ವರದಿಯೊಂದಿಗೆ ಸರ್ಕಾರಕ್ಕೆ ಕಳುಹಿಸಲಾದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ

ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು, ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ಫಿರ್ಯಾದುದಾರರಿಂದ ಮನೆ ಕಟ್ಟುವ ಉದ್ದೇಶದಿಂದ ಸದರಿ ಜಮೀನನ್ನು ಅನ್ಯಸಂಕ್ರಮಣ ಮಾಡಿಸಲು ಸಲ್ಲಿಸಿದ ಅರ್ಜಿಯ ಸಂಬಂಧ ಬಡಾವಣೆ ನಕ್ಷೆ ತಯಾರಿಸುವ ಸಂಬಂಧ ರೂ. 3,500/–ಗಳನ್ನು ಬೇಡಿಕೆ ಇಟ್ಟು ರೂ. 3,500/–ಗಳನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೋಲಿಸರು ಬೀಸಿದ ಬಲೆಗೆ ಸಿಲುಕಿ ನಂತರ ಬಂಧನಕ್ಕೊಳಗಾಗಿರುವ ಅಂಶವನ್ನು ಸರ್ಕಾರವು ಗಮನಿಸಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ–1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ–1988ರ ಅನ್ವಯ ಕಲಂ 7, 13(1)ಡಿ ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಗಗೊಳಿಸಲು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ–1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು (ಹಾಲಿ ಅಮಾನತ್ತಿನಲ್ಲಿ) ಇವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 195 ನಯೋಸೇ 2010, ಬೆಂಗಳೂರು, ದಿನಾಂಕ 07–01–2011**

ಆರೋಪಿಯಾದ ಶ್ರೀ ರವಿ ಓಜನಹಳ್ಳಿ, ನಗರ ಯೋಜಕರು, ನಗರ ಮತ್ತು ಗ್ರಾಮಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ರವಿ ಓಜನಹಳ್ಳಿ ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು ಇವರನ್ನು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ–1988ರ ಕಲಂ 7, 13(1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 18 ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ಈ ದಿನ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 260

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಎ. ವೆಂಕಟರಮಣಯ್ಯ, ಪಿಎಸ್‌ಐ, ಪೀಣ್ಯ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : 1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ.02/ಸಿಬ್ಬಂದಿ–1/2010–11, ದಿನಾಂಕ 22–05–2010, 19–08–2010 ಮತ್ತು 19–11–2010.

2) ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ: ಸಿಬ್ಬಂದಿ (1) 07:2009–10, ಸಂಖ್ಯೆ.158/2009–10, ದಿನಾಂಕ 03–03–2010.

**ಪ್ರಸ್ತಾವನೆ :**

ಶ್ರೀ ಎ. ವೆಂಕಟರಮಣಯ್ಯ, ಪಿಎಸ್‌ಐ, ಪೀಣ್ಯ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸೇವಾನಿರತ ಪಿಎಸ್‌ಐ ಆಗಿ ದಿನಾಂಕ 30–12–2001 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಇವರ 2½ ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ 30–06–2004ಕ್ಕೆ ಪೂರ್ಣಗೊಂಡರೂ ನಿಗಧಿತ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲವಾದ್ದರಿಂದ, ಇವರ ಖಾಯಂಪೂರ್ವ ಅವಧಿಯನ್ನು ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ರನ್ವಯ 1 ವರ್ಷ 3 ತಿಂಗಳವರೆಗೆ ಅಂದರೆ ದಿನಾಂಕ 01–07–2004 ರಿಂದ 30–09–2005 ರವರೆಗೆ ನೇಮಕಾತಿ ಪ್ರಾಧಿಕಾರವು ಒಳಪಟ್ಟಂತೆ ವಿಸ್ತರಿಸಿರುತ್ತದೆ.

ಸದರಿ ಪಿಎಸ್‌ಐ ರವರು ದಿನಾಂಕ 29–08–2009 ರಂದು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಆದ್ದರಿಂದ ಸದರಿಯವರ ಖಾಯಂಪೂರ್ವ ಅವಧಿ ದಿನಾಂಕ 01–10–2005 ರಿಂದ 28–08–2009 ರವರೆಗೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ರನ್ವಯ ವಿಸ್ತರಿಸಲು ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 209 ಪೊಸಇ 2010, ಬೆಂಗಳೂರು, ದಿನಾಂಕ: 06–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು 1977ರ ನಿಯಮ 4(1)(i) ರನ್ವಯ ಶ್ರೀ ಎ. ವೆಂಕಟರಮಣಯ್ಯ, ಪಿಎಸ್‌ಐ, ಪೀಣ್ಯ ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 01–10–2005 ರಿಂದ 28–08–2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 187

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ) (ನಿವೃತ್ತ) ಅಧಿಕಾರಿ, ಹಿಂದಿನ ತಹಶೀಲ್ದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಇತರೆಯವರ ವಿರುದ್ಧ ಜಂಟೀ ಇಲಾಖಾ ವಿಚಾರಣೆ-ಅಂತಿಮ ಆದೇಶ.

**ಓದಲಾಗಿದೆ** :
1) ದಿನಾಂಕ 17-01-08ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 260 ಕೆಇವಿ 07
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ 27-11-09.
3) ದಿನಾಂಕ 08-02-10ರ ನೋಟೀಸು ಸಂಖ್ಯೆ: ಸಿಆಸುಇ 260 ಕೆಇವಿ 07
4) ದಿನಾಂಕ 11-08-10ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 260 ಕೆಇವಿ 07
5) ದಿನಾಂಕ 17-08-10ರ ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 260 ಕೆಇವಿ 07
6) ದಿನಾಂಕ 08-12-10ರ ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: PSC 126 CNS 10.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಜೋಗಯ್ಯ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರರ ಹುದ್ದೆಯಲ್ಲಿ ಶ್ರೀ ವಿ. ಸಿ. ಇನಾಂದಾರ್ ರವರು ಹಕ್ಕುದಾಖಲೆ ಶಿರಸ್ತೇದಾರರ ಹುದ್ದೆಯಲ್ಲಿ ಶ್ರೀ ಐ. ಕೆ. ತಟಗಾರ್, ದೊಡ್ಡಹುಲ್ಲೂರು ವೃತ್ತದ ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಶ್ರೀಮತಿ ಎಂ. ಲೀಲಾವತಿ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ, ಶ್ರೀ ಸುನೀಲ್ ಕುಮಾರ್, ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಯಲ್ಲಿ ಮತ್ತು ಡಿ. ಎಂ. ಆಂಜಿನಪ್ಪ, ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರುಗಳ ವಿರುದ್ಧ, ಹೊಸಕೋಟೆ ತಾಲ್ಲೂಕು ಕಸಬಾ ಹೋಬಳಿ, ಚಿಕ್ಕಹುಲ್ಲೂರು ಗ್ರಾಮದ ಸರ್ಕಾರಿ ಜಮೀನು ಸರ್ವೆ ನಂ. 25ರಲ್ಲಿ ಒಟ್ಟು 17 ಜನರಿಗೆ ಖೋಟಾ (Bogus) ಸಾಗುವಳಿ ಚೀಟಿ ಆಧಾರದ ಮೇಲೆ ಮಂಜೂರು ಮಾಡಲಾಗಿದೆ ಎನ್ನುವ ಸೃಷ್ಠಿತ ಕಡತದ ಆಧಾರದ ಮೇಲೆ ಪೋಡಿ ದುರಸ್ತಿಪಡಿಸಿ, ಹೊಸ ಸರ್ವೆ ನಂ. 54 ರಿಂದ 70 ಎಂದು ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಸಿರುವ ಆರೋಪದ ಸಂಬಂಧ ಸದರಿ ನಿವೃತ್ತ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಿ, ಜಂಟೀ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ, ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯಂತೆ, (1) ಶ್ರೀ ಜೋಗಯ್ಯ, ತಹಶೀಲ್ದಾರ್ ರವರು ಒಬ್ಬರ ಪೋಡಿ ದುರಸ್ತಿಗಾಗಿ ಸಹಾಯಕ ನಿರ್ದೇಶಕರು, ಭೂ ಮಾಪನ ಇಲಾಖೆ Assistant Director of Land Records (ADLR) ಇವರಿಗೆ ಕಳುಹಿಸಿದ ಕಡತವು ಹಿಂತಿರುಗಿ ಬಂದಾಗ ಒಬ್ಬರ ಹೆಸರಿನ ಬದಲಿಗೆ ಇತರೇ ಒಟ್ಟು 17 ಜನರ ಹೆಸರಿಗೆ ಪೋಡಿ ದುರಸ್ತಿಯಾಗಿರುವುದನ್ನು ಪರಿಶೀಲಿಸಿರುವುದಿಲ್ಲ ಮತ್ತು ಮ್ಯುಟೇಶನ್ ಅಂಗೀಕರಿಸುವಾಗ ಚೆಕ್ ರಿಜಿಸ್ಟರಿನಲ್ಲಿ ಗ್ರಾಮ ಲೆಕ್ಕಿಗರು ಮಾಡಿರುವ ನಮೂದುಗಳನ್ನು ಮಂಜೂರಾತಿ ದಾಖಲೆಗಳೊಂದಿಗೆ ಪರಿಶೀಲಿಸಿ ಆದೇಶ ಮಾಡಬೇಕಿತ್ತು. ಆದರೆ ಇವರು ಈ ರೀತಿ ಮಾಡಿಲ್ಲದ ಕಾರಣ, ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (2) ಶ್ರೀ ಇನಾಂದಾರ್, ಹಕ್ಕು ದಾಖಲೆ ಶಿರಸ್ತೇದಾರ್ ಇವರು ಪೋಡಿ ದುರಸ್ತಿಗಾಗಿ ಸಲ್ಲಿಸಿದ ಅರ್ಜಿಯನ್ನು ಕೂಲಂಕಷವಾಗಿ ಪರಿಶೀಲಿಸದೆ ವಿಷಯ ನಿರ್ವಾಹಕರ ಪ್ರಸ್ತಾವನೆಯನ್ನು ಕಛೇರಿ ಕಾರ್ಯವಿಧಾನದಂತೆ ತಹಶೀಲ್ದಾರರಿಗೆ ಮಂಡಿಸದೇ, ಅರ್ಜಿಯೊಂದಿಗೆ ಅಗತ್ಯ ದಾಖಲೆಗಳು ಇದ್ದವೇ, ಇದ್ದಲ್ಲಿ ಅದರ ನೈಜತೆ ಇತ್ಯಾದಿಗಳನ್ನು ಪರಿಶೀಲಿಸದೇ ತಮ್ಮ ಹಂತದಲ್ಲಿಯೇ ಅರ್ಜಿಯನ್ನು ADLR ರವರಿಗೆ ರವಾನಿಸುವ ಮೂಲಕ ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (3) ಶ್ರೀ ತಟಗಾರ್, ಗ್ರಾಮ ಲೆಕ್ಕಿಗರು ಇವರು ಮ್ಯುಟೇಶನ್ ಅಂಗೀಕರಿಸುವ ಪೂರ್ವದಲ್ಲಿ ಯಾವುದೇ ಪ್ರಕರಣದ ಪೂರ್ವಾಪರಗಳನ್ನು ಹಾಗೂ ಮೂಲ ದಾಖಲೆಗಳನ್ನು ಸಮಗ್ರವಾಗಿ ಪರಿಶೀಲಿಸಬೇಕು. ಆದರೆ ಇವರು ಈ ರೀತಿ ಮಾಡಿಲ್ಲದ ಕಾರಣ ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (4) ಶ್ರೀಮತಿ ಲೀಲಾವತಿ, ದ್ವಿತೀಯ ದರ್ಜೆ ಸಹಾಯಕಿ ಇವರು ಪೋಡಿ ದುರಸ್ತಿಗಾಗಿ ಬಂದ ಅರ್ಜಿಯನ್ನು ಕಛೇರಿ ಕಾರ್ಯವಿಧಾನದಂತೆ ಮಂಡಿಸದೇ, ಶಿರಸ್ತೇದಾರರ ಹಂತದಲ್ಲಿಯೇ ಅರ್ಜಿಯ ಮೇಲೆ ಸಹಿ ಪಡೆದು ADLR ರವರಿಗೆ ರವಾನಿಸುವ ಮೂಲಕ ಕರ್ತವ್ಯವಿಮುಖತೆಯನ್ನು ತೋರಿದ್ದು ಒಟ್ಟು 17 ಜನರ ಹೆಸರಿಗೆ 58-00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಗೊಳ್ಳಲು ಕಾರಣಕರ್ತರಾಗಿದ್ದು, ಇವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. (5) ಶ್ರೀ ಸುನಿಲ್ ಕುಮಾರ್, ದ್ವಿತೀಯ ದರ್ಜೆ ಭೂಮಾಪಕರು ಇವರು ತಹಶೀಲ್ದಾರರ ಕಛೇರಿಯಿಂದ ರವಾನಿಸಲಾದ ಒಬ್ಬರ ಪೋಡಿ ದುರಸ್ತಿಯ ಅರ್ಜಿಯ ಜೊತೆಗೆ ಇತರೇ ಯಾವುದೇ ಅಗತ್ಯ ಮೂಲ ದಾಖಲೆಗಳು ಇಲ್ಲದಿರುವ ಬಗ್ಗೆ ಗಮನಿಸಬೇಕಿತ್ತು. ತಾಲ್ಲೂಕು ಕಛೇರಿಯಿಂದ ಯಾವುದೇ ದಾಖಲೆಗಳು ಉಲ್ಲೇಖಿಸಲ್ಪಡದೇ ಇದ್ದರೂ ಸಹ ಬೋಗಸ್ ಸಾಗುವಳಿ ಚೀಟಿ ಆಧಾರದ ಮೇಲೆ ಸೃಷ್ಟಿಸಲಾದ ಬೋಗಸ್ ಮಂಜೂರು ದಾಖಲೆಗಳ ಆಧಾರದ ಮೇಲೆ ಭೂಮಾಪನ ಕಾರ್ಯ ನಿರ್ವಹಿಸುವ ಮೂಲಕ ಹೊಸ ಸರ್ವೆ ನಂಬರುಗಳನ್ನು ನೀಡುವಲ್ಲಿ ಕರ್ತವ್ಯ ಲೋಪ ಎಸಗಿರುವ ಆರೋಪವು ಸಾಬೀತಾಗಿರುತ್ತದೆ. (6) ಶ್ರೀ ಆಂಜಿನಪ್ಪ, ದ್ವಿತೀಯ ದರ್ಜೆ ಭೂಮಾಪಕರು ಇವರು ADLR ರವರಿಂದ ಕ್ರಮ ಸಂಖ್ಯೆ: 1 ರಿಂದ 27 ರವರೆಗಿನ ಕಡತಗಳನ್ನು ಇವರು ಸ್ವೀಕರಿಸಿದ್ದು, ಇದರಲ್ಲಿನ ಕ್ರಮ ಸಂಖ್ಯೆ: 3ರ ಕಡತವು ಪ್ರಶ್ನಿತ ಸರ್ಕಾರಿ ಜಮೀನಿಗೆ ಸಂಬಂಧಿಸಿದ ಕಡತವಾಗಿದ್ದು, ಇದನ್ನು ಇವರು ಕಛೇರಿಗೆ ಹಿಂದಿರುಗಿಸಿರುವುದಿಲ್ಲ, ಕಡತವನ್ನು ಕಛೇರಿಗೆ ಹಿಂದಿರುಗಿಸಿರುವ ಬಗ್ಗೆ ಯಾವುದೇ ಸಾಕ್ಷ್ಯವನ್ನು ಹಾಜರುಪಡಿಸಿರುವುದಿಲ್ಲ, ಆರೋಪಿತರು ಕಡತವನ್ನು ಸ್ವೀಕರಿಸಿದ್ದರೂ ಸಹ ಅಕ್ರಮ/ಅವ್ಯವಹಾರ ಬೆಳಕಿಗೆ ಬರುತ್ತದೆ ಎಂಬ ಪ್ರಜ್ಞೆಯಿಂದ ಕಡತವನ್ನು ಹಿಂತಿರುಗಿಸದೇ ಮ್ಯುಟೇಶನ್ ಪೋಡಿ ಚೆಕ್ ವಹಿಯಲ್ಲಿ ದಾಖಲಿಸಿರುವ ನಮೂದನೆಗಳು ತನ್ನ ಕರ್ತವ್ಯದ ಅವಧಿಯಲ್ಲಿ ನಡೆದಿರುವುದಿಲ್ಲವೆಂದು ಮತ್ತು ಬರವಣಿಗೆಯು ತನ್ನದಲ್ಲವೆಂದು ಪರಿಸ್ಥಿತಿ ಲಾಭವನ್ನು ಪಡೆಯಲು ಪ್ರಜ್ಞಾಪೂರ್ವಕವಾಗಿ ವ್ಯವಹರಿಸಿರುವುದು ಕಂಡುಬಂದಿರುವುದರಿಂದ ಇವರ ವಿರುದ್ಧದ ಆರೋಪವು ಸಹ ಸಾಬೀತಾಗಿರುತ್ತದೆ.

ಸರ್ಕಾರವು ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅಂಗೀಕರಿಸುತ್ತಾ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ವಿಚಾರಣಾ ವರದಿಯ ನಿರಾಕರಣೆ ಬಗ್ಗೆ ಶ್ರೀ ಜೋಗಯ್ಯ, ಶ್ರೀ ಇನಾಂದಾರ್, ಶ್ರೀ ತಟಗಾರ್, ಶ್ರೀಮತಿ ಲೀಲಾವತಿ, ಶ್ರೀ ಸುನೀಲ್ ಕುಮಾರ್ ಮತ್ತು ಶ್ರೀ ಆಂಜಿನಪ್ಪ ರವರುಗಳು ಸಲ್ಲಿಸಿದ ಲಿಖಿತ ಅಹವಾಲುಗಳು ಯಾವುದೇ ಸಮರ್ಥನೆಯಿಂದ ಕೂಡಿರುವುದಿಲ್ಲವೆಂದು ಸರ್ಕಾರವು ಪರಿಗಣಿಸುತ್ತಾ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, (1) ಶ್ರೀ ವಿ. ಸಿ. ಇನಾಂದಾರ್, ಅಂದಿನ ಹಕ್ಕು ದಾಖಲೆ ಶಿರಸ್ತೇದಾರ್ (2) ಶ್ರೀಮತಿ ಎಂ. ಲೀಲಾವತಿ, ಅಂದಿನ ದ್ವಿತೀಯ ದರ್ಜೆ ಸಹಾಯಕರು (3) ಶ್ರೀ ಸುನೀಲ್ ಕುಮಾರ್, ಅಂದಿನ ದ್ವಿತೀಯ ದರ್ಜೆ ಭೂಮಾಪಕರು ಮತ್ತು (4) ಶ್ರೀ ಡಿ. ಎಂ. ಆಂಜಿನಪ್ಪ, ಅಂದಿನ ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳಿಗೆ ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ (with cumulative effect) ತಡೆಹಿಡಿಯುವ ದಂಡನೆ ವಿಧಿಸಿದ ಹಾಗೂ ಶ್ರೀ ಜೋಗಯ್ಯ ಮತ್ತು ಶ್ರೀ ತಟಗಾರ್ ಇವರುಗಳಿಗೆ ಸಂಬಂಧಿಸಿದಂತೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ತಿಳಿಸಲಾಗಿದ್ದಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಶ್ರೀ ಜೋಗಯ್ಯ, ಕೆಎಎಸ್ (ನಿವೃತ್ತ) ಇವರ ನಿವೃತ್ತಿ ವೇತನದಿಂದ ಮಾಸಿಕವಾಗಿ ವೇತನವನ್ನು ಕಟಾಯಿಸುವ ಸರ್ಕಾರದ ಪ್ರಸ್ತಾವನೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ತನ್ನ ಸಹಮತಿಯನ್ನು ನೀಡಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:, ಸಿಆಸುಇ 260 ಕೆಇವಿ 07, ಬೆಂಗಳೂರು, ದಿನಾಂಕ: 01–01–2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೋಗಯ್ಯ, ಕೆಎಎಸ್ (ನಿವೃತ್ತ) ಹಿಂದಿನ ತಹಶೀಲ್ದಾರ್, ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ನಿವೃತ್ತಿ ವೇತನದಿಂದ ಮಾಸಿಕ ರೂ. 500–00 ಗಳನ್ನು (ಐದು ನೂರು ರೂಪಾಯಿಗಳು) ತಕ್ಷಣದಿಂದ ಜಾರಿಗೆ ಬರುವಂತೆ 5 (ಐದು) ವರ್ಷಗಳ ಅವಧಿಯವರೆಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಶ್ರೀ ತಟಗಾರ್ ಇವರಿಗೆ ಸಂಬಂಧಿಸಿದಂತೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 188 ಸಿಆಸುಇ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎಸ್. ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರ ವಿರುದ್ಧ ಇಲಾಖಾ ವಿಚಾರಣೆ– ಮಂಡನಾಧಿಕಾರಿಯವರನ್ನು ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 206 ಸೇಇವಿ 2007, ದಿನಾಂಕ 09–11–2010 ಮತ್ತು ತಿದ್ದುಪಡಿ ಆದೇಶ ದಿನಾಂಕ 29–11–2010.

2) ಅಧೀನ ಕಾರ್ಯದರ್ಶಿ (ಸೇವೆಗಳು 2 ಮತ್ತು 3) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಪತ್ರ ದಿನಾಂಕ 21–12–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 09–11–2010 ಮತ್ತು 29–11–2010 ರಲ್ಲಿ ಶ್ರೀ ಎಸ್. ಆರ್. ಶಂಕರ್, ಅಧೀನ ಕಾರ್ಯದರ್ಶಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಂ. ಉಮೇಶ್, ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ, ತರಬೇತಿ ಸಂಸ್ಥೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–2 ಮತ್ತು 3) ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಗಳ ಆಂತರಿಕ ವರ್ಗಾವಣೆ ಮಾಡಿದ್ದು, ಶ್ರೀಮತಿ ಕೆ.ಎಸ್. ಸರೋಜಮ್ಮ, ಅಧೀನ ಕಾರ್ಯದರ್ಶಿ ಇವರು ಈ ಹಿಂದೆ ಆರೋಗ್ಯ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಂತರಿಕ ಬದಲಾವಣೆಯಿಂದಾಗಿ ಪ್ರಸ್ತುತ ಸೇವೆಗಳು 2 ಮತ್ತು 3 ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು. ಈ ಪ್ರಕರಣದಲ್ಲಿ ಅಧಿಕಾರಿಯನ್ನು ಸಾಕ್ಷಿದಾರರನ್ನಾಗಿ ಗುರುತಿಸಿರುವುದರಿಂದ ಪ್ರಕರಣ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿಯೂ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು, ಆದ್ದರಿಂದ ಬೇರೊಬ್ಬ ಅಧೀನ ಕಾರ್ಯದರ್ಶಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಬೇಕೆಂದು ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ:, ಸಿಆಸುಇ 206 ಸೇಇವಿ 2007, ಬೆಂಗಳೂರು, ದಿನಾಂಕ: 05–01–2011**

ಈ ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ದಿನಾಂಕ 09–11–2010ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಆರೋಗ್ಯ) ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ಉಳಿದಂತೆ ಶ್ರೀ ಎಂ. ಉಮೇಶ್, ನಿರ್ದೇಶಕರು, ಕರ್ನಾಟಕ ಸಚಿವಾಲಯ ತರಬೇತಿ ಸಂಸ್ಥೆ ಇವರನ್ನು ವಿಚಾರಣಾಧಿಕಾರಿಗಳಾಗಿ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 189 ಸಿಆಸುಇ (ಸೇವೆಗಳು–2)